KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| | | |
|---|---|---|
| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೮, ೨೦೦೯ (ಆಶ್ವಯುಜ ೧೬, ಶಕ ವರ್ಷ ೧೯೩೧) | ಸಂಚಿಕೆ ೪೦ |


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ:** ರೈಲ್ವೆ ಮೆನ್ಸ್ ಹೌಸ್ ಬಿಲ್ಡಿಂಗ್ ಕೋ–ಅಪರೇಟಿವ್ ಸೊಸೈಟಿ ತುಮಕೂರು ಇವರಿಗೆ ತುಮಕೂರು ಜಿಲ್ಲೆ, ತುಮಕೂರು ತಾ: ಗೆದ್ದಲಹಳ್ಳಿ ಹಾಗೂ ಮರಳೂರು ಗ್ರಾಮಗಳ ವಿವಿಧ ಸರ್ವೆ ನಂಬರುಗಳಲ್ಲಿ ಒಟ್ಟು 4 ಎಕರೆ 36 ಗುಂಟೆ ಜಮೀನನ್ನು ಮಂಜೂರು ಮಾಡಲು ಸರ್ಕಾರದ ಅನುಮತಿ.

**ಓದಲಾಗಿದೆ:** ಜಿಲ್ಲಾಧಿಕಾರಿ, ತುಮಕೂರು ಜಿಲ್ಲೆ, ಇವರ ಪತ್ರ ಸಂ:ಎಲ್‌ಆರ್‌ಎಫ್. ಸಿ.ಆರ್.52/06–07 ದಿನಾಂಕ:12.02.2008.

**ಪ್ರಸ್ತಾವನೆ:**

ಮೇಲೆ ಓದಲಾದ ತುಮಕೂರು ಜಿಲ್ಲಾಧಿಕಾರಿಯವರ ಪತ್ರದಲ್ಲಿ, ರೈಲ್ವೆ ಮೆನ್ಸ್ ಹೌಸ್ ಬಿಲ್ಡಿಂಗ್ ಕೋ–ಅಪರೇಟಿವ್ ಸೊಸೈಟಿ, ತುಮಕೂರು, ಈ ಸಂಸ್ಥೆಯ ವತಿಯಿಂದ ರೈಲ್ವೆ ಇಲಾಖೆಯ ಕೆಳ ದರ್ಜೆಯ ಹಾಗೂ ಎಲ್ಲಾ ವರ್ಗದ ಎಲ್ಲಾ ನೌಕರರುಗಳಿಗೆ ನ್ಯಾಯಯುತವಾಗಿ ನಿವೇಶನಗಳನ್ನು ನೀಡುವ ಉದ್ದೇಶವನ್ನು ಅರ್ಜಿದಾರ ಸಂಸ್ಥೆಯು ಹೊಂದಿರುವುದರಿಂದ ಹಾಗೂ ಅರ್ಜಿದಾರ ಸಂಸ್ಥೆಯು ಸದರಿ ಕಡತವನ್ನು ಘಟನೋತ್ತರ ಅನುಮತಿ ಪಡೆಯಲು ಉನ್ನತ ಸಮಿತಿಯ ಮುಂದೆ ಮಂಡಿಸಿ ಮರು ಮಂಜೂರು ಮಾಡಿಕೊಡಲು ಕೋರಿ ಮನವಿ ಸಲ್ಲಿಸಿರುವುದರಿಂದ, ಅರ್ಜಿದಾರ ಸಂಸ್ಥೆಯು ಕೋರಿರುವಂತೆ ಹಾಗೂ ಸದರಿ ಪ್ರಕರಣದ ಬಾಬ್ತು ಈ ಕಾರ್ಯಾಲಯದಿಂದ ಈಗಾಗಲೇ ಸರ್ಕಾರಕ್ಕೆ ಸಲ್ಲಿಸಲಾಗಿರುವ ವರದಿಯಂತೆ ಸದರಿ ಪ್ರಕರಣದ ಬಗ್ಗೆ ಸರ್ಕಾರದ ಹಂತದಲ್ಲಿ ಕ್ರಮ ಕೈಗೊಳ್ಳಲು ಶಿಫಾರಸ್ಸು ಮಾಡಿರುತ್ತಾರೆ. ಮತ್ತು ಇವರಿಗೆ ತುಮಕೂರು ತಾಲ್ಲೂಕು, ಗೆದ್ದಲಹಳ್ಳಿ ಗ್ರಾಮದ ಸರ್ವೆ ನಂ.29/1 ರಲ್ಲಿ 2 ಎಕರೆ ಹಾಗೂ ಮರಳೂರು ಗ್ರಾಮದ ಸರ್ವೆ ನಂ.23/3 ರಲ್ಲಿ 2 ಎಕರೆ 36 ಗುಂಟೆ ಜಮೀನನ್ನು ಸರ್ಕರದ ರಾಜ್ಯ ಪತ್ರದ ಅಧಿಸೂಚನೆ ದಿನಾಂಕ: 28.10.1995 ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109ರ ತಿದ್ದುಪಡಿಯಂತೆ ಕಲಂ 63 ಮತ್ತು 79 (ಎ)(ಬಿ) ಹಾಗೂ 83 ರ ಮೇರೆಗೆ ಗೃಹ ನಿರ್ಮಾಣ ಸಹಕಾರ ಸಂಘಗಳಿಗೆ ಸಂಬಂಧಿಸಿದ ಯಾವುದೇ ಜಮೀನನ್ನು ಗೃಹ ನಿರ್ಮಾಣಕ್ಕೆ ಉಪಯೋಗಿಸಿಕೊಳ್ಳಲು ಅನುಮತಿ ನೀಡಲು ಅವಕಾಶವಿರುತ್ತದೆ ಎಂದು ಕೂಡ ತಿಳಿಸಿರುತ್ತಾರೆ.

ಈ ಪ್ರಸ್ತಾವನೆಗೆ ಕಾನೂನು ಕೋಶದ ಮುಖ್ಯಸ್ಥರು ಈ ಕೆಳಕಂಡ ಅಭಿಪ್ರಾಯ ನೀಡಿರುತ್ತಾರೆ.

"ಈ ಪ್ರಕರಣದಲ್ಲಿ ಅರ್ಜಿದಾರರ ಕೋರಿಕೆ ಮೇರೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ಕಾಯ್ದೆಯಡಿಯಲ್ಲಿ ಕಲಂ 20(ಸಿ) ಅನುಸಾರ ಮುಟ್ಟುಗೋಲು ಹಾಕಿಕೊಂಡ ಜಮೀನನ್ನು ಮಂಜೂರ ಮಾಡಬಹುದು. ಕಲಂ 20(1)ರ ಅನುಸಾರ ಕಾಯ್ದೆ ಓದುವುದೇನೆಂದರೆ "Land may be granted by the Deputy Commissioner with the prior approval of the State Government under these rules" ಹಾಗೂ ಕಲಂ 20(ಸಿ) ಓದುವುದೇನೆಂದರೆ– "Co-operative Socities and

statutary bodies like the Karnataka State Road Corporation, the K.P.T.C. etc., on collection of 50% of market value to be determined by the Deputy Commissioner". ಆದ್ದರಿಂದ ಈ ಪ್ರಕರಣದಲ್ಲಿ ರೈಲ್ವೆ ಮೆನ್ಸ್ ಹೌಸ್ ಬಿಲ್ಡಿಂಗ್ ಕೋ–ಅಪರೇಟಿವ್ ಸೊಸೈಟಿ, ತುಮಕೂರು, ಇವರಿಂದ ಮುಟ್ಟುಗೋಲು ಹಾಕಿಕೊಂಡ ಎರಡು ಜಮೀನುಗಳನ್ನು ಕಲಂ 20(1)(ಸಿ) ಅನ್ವಯ ಜಮೀನನ್ನು ಮಂಜೂರು ಮಾಡಲು ಕಾನೂನಿನ ತೊಡಕಿರುವುದಿಲ್ಲ".

ಮೇಲ್ಕಂಡ ಕಾನೂನು ಅನುಸರಿಸಿ ಅರ್ಜಿದಾರರ ಸಂಸ್ಥೆಗೆ ಮುಟ್ಟುಗೋಲು ಹಾಕಿಕೊಂಡಂಥ ಜಮೀನನ್ನು ಸರ್ಕಾರದ ಅನುಮತಿ ಹೊರಡಿಸಿ ಸಂಬಂದಪಟ್ಟ ಜಿಲ್ಲಾಧಿಕಾರಿಗಳಿಗೆ ಜಮೀನು ಮಂಜೂರು ಮಾಡಲು ಆದೇಶ ಹೊರಡಿಸಬಹುದು ಎಂಬ ಅಭಿಪ್ರಾಯದೊಂದಿಗೆ ಕಡತವನ್ನು ತಮ್ಮ ಅನುಮೋದನೆಗಾಗಿ ಒಪ್ಪಿಸಿದೆ".

ಮೇಲ್ಕಂಡ ಅಂಶಗಳಂತೆ ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 53 ಎಲ್ಆರ್ಎಂ 2007, ಬೆಂಗಳೂರು, ದಿನಾಂಕ: 21ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳಂತೆ ತುಮಕೂರು ತಾಲ್ಲೂಕು ಗೆದ್ದಲಹಳ್ಳಿ ಗ್ರಾಮದ ಸರ್ವೆ ನಂ.29/3 ರಲ್ಲಿ 2 ಎಕರೆ ಹಾಗೂ ಮರಳೂರು ಗ್ರಾಮದ ಸರ್ವೆ ನಂ.23/3 ರಲ್ಲಿ 2 ಎಕರೆ 36 ಗುಂಟೆ ಹೀಗೆ ಒಟ್ಟು 4 ಎಕರೆ 36 ಗುಂಟೆ ಕೃಷಿ ಜಮೀನನ್ನು ಮಾರುಕಟ್ಟೆ ದರವನ್ನು ವಿಧಿಸಿ ಸರ್ಕಾರಕ್ಕೆ ಪಾವತಿಸುವ ಷರತ್ತಿಗೊಳಪಟ್ಟು ರೈಲ್ವೆ ಮೆನ್ಸ್ ಹೌಸ್ ಬಿಲ್ಡಿಂಗ್ ಕೋ–ಅಪರೇಟಿವ್ ಸೊಸೈಟಿ, ತುಮಕೂರು ಇವರಿಗೆ ಭೂ ಮಂಜೂರಾತಿ ಕಾಯ್ದೆ ನಿಯಮ 20(1)(ಸಿ) ಅಡಿಯಲ್ಲಿ ಸರ್ಕಾರದ ಅನುಮತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2120

**ಟಿ.ಎನ್. ನಾರಾಯಣಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಸುಧಾರಣೆ)

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಲೋಕೋಪಯೋಗಿ ಸಚಿವಾಲಯದಲ್ಲಿ ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶ–Budget and Fiscal Monitoring Cellನ್ನು ಸೃಷ್ಟಿಸುವ ಬಗ್ಗೆ.

**ಪ್ರಸ್ತಾವನೆ:**

ಲೋಕೋಪಯೋಗಿ ಇಲಾಖೆಯಲ್ಲಿ ವರ್ಷೇವರ್ಷೇ ಹೆಚ್ಚುತ್ತಿರುವ ಕಾರ್ಯಬಾಹುಳ್ಯ ಹಾಗೂ ಕಾರ್ಯ ಕ್ಷೇತ್ರದಿಂದಾಗಿ ಆರ್ಥಿಕ ಹಾಗೂ ಭೌತಿಕ ರಂಗಗಳಲ್ಲಿ ಅಧಿಕಗೊಳ್ಳುತ್ತಿರುವ ಹಾಗೂ ವಿಸ್ತಾರಗೊಳ್ಳುತ್ತಿರುವ ರಸ್ತೆ ಮತ್ತು ಕಟ್ಟಡ ಯೋಜನೆಗಳ ಸಕಾಲಿಕ, ಸಮರ್ಪಕ ನಿರ್ವಹಣೆ, ನಿಯಂತ್ರಣ ಹಾಗೂ ಸಮರ್ಥ ಉಸ್ತುವಾರಿಗಾಗಿ ಈಗಾಗಲೇ ಕಾರ್ಯನಿರ್ವಹಿಸುತ್ತಿರುವ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆ (ಮಧ್ಯಮಾವಧಿ ವಿತ್ತೀಯ ಕೋಶ)ಯನ್ನು–Internal Financial Advisor Section, Medium Term Fiscal Plan Cell-ಸಬಲೀಕರಿಸುವ ನಿಟ್ಟಿನಲ್ಲಿ ಮೇಲ್ದರ್ಜೆಗೇರಿಸಲು ಸರ್ಕಾರವು ತೀರ್ಮಾನಿಸಿದ್ದು, ಹಾಲಿ ಕಾರ್ಯನಿರ್ವಹಿಸುತ್ತಿರುವ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆ (ಮಧ್ಯಮಾವಧಿ ವಿತ್ತೀಯ ಕೋಶ)– Internal Financial Advisor Section, Medium Term Fiscal Plan Cell-ಯನ್ನು, ಪ್ರಧಾನ ಕಾರ್ಯದರ್ಶಿಗಳ ನೇರ ನಿಯಂತ್ರಣ ಹಾಗೂ ಅವರ ಆಡಳಿತ ವ್ಯಾಪ್ತಿಗೊಳಪಡುವಂತೆ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಪ್ರತ್ಯೇಕವಾದ ಒಂದು ಪೂರ್ಣಪ್ರಮಾಣದಲ್ಲಿ ಶಾಶ್ವತವಾಗಿ ಜಾರಿಗೆ ಬರುವಂತೆ, "ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶ–Budget and Fiscal Monitoring Cell" ಎಂದು ಮರುನಾಮಕರಣಗೊಳಿಸಿ ಸೃಜಿಸಲು ಹಾಗೂ ಮಧ್ಯಮಾವಧಿ ವಿತ್ತೀಯ ಕೋಶದ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಯನ್ನೇ, ಈ ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶದ ನಿರ್ದೇಶಕರು(ಆರ್ಥಿಕ) ಹಾಗೂ ಪದನಿಮಿತ್ತ ಜಂಟಿಕಾರ್ಯದರ್ಶಿ ಹುದ್ದೆಯೆಂದು, ವೇತನಶ್ರೇಣಿ ರೂ.24450–600–26250–675–30300–750–31800ನಲ್ಲಿ ಮೇಲ್ದರ್ಜೆಗೇರಿಸಿ ಶಾಶ್ವತವಾಗಿ ಜಾರಿಯಲ್ಲಿರುವಂತೆ ಮರುನಾಮಕರಣಗೊಳಿಸಿ, ಈಗಾಗಲೇ ಮಧ್ಯಮಾವಧಿ ವಿತ್ತೀಯ ಕೋಶದಲ್ಲಿ ಆಂತರಿಕ ಆರ್ಥಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಆರ್.ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರನ್ನು ಮೇಲ್ದರ್ಜೆಗೇರಿಸಲಾಗುವ ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶ ನಿರ್ದೇಶಕರು (ಆರ್ಥಿಕ) ಹಾಗೂ ಸರ್ಕಾರದ ಪದನಿಮಿತ್ತ ಜಂಟಿಕಾರ್ಯದರ್ಶಿಗಳ ಹುದ್ದೆಗೆ ನೇಮಕ ಮಾಡಿ ಶಾಶ್ವತವಾಗಿ ವಿಲೀನಗೊಳಿಸಿ ಪೂರಕ ಸಿಬ್ಬಂದಿಯೊಂದಿಗೆ ಸೃಷ್ಟಿಸಲು ಮಂಜೂರಾತಿ ನೀಡುವಂತೆ ತೀರ್ಮಾನಿಸಲಾಗಿರುತ್ತದೆ.

ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂ.:ಲೋಇ:10:ಐಎಫ್‌ಎ:2009, ಬೆಂಗಳೂರು ದಿನಾಂಕ: 22ನೇ ಸೆಪ್ಟೆಂಬರ್ 2009**

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಆರ್ಥಿಕ ವಲಯದ ಸಕಾಲಿಕ, ಸಮರ್ಪಕ ನಿರ್ವಹಣೆ, ನಿಯಂತ್ರಣ ಹಾಗೂ ಸಮರ್ಥ ಉಸ್ತುವಾರಿಗಾಗಿ, ಹಣಕಾಸಿಗೆ ಸಂಬಂಧಪಟ್ಟ ಎಲ್ಲಾ ವಿಷಯಗಳನ್ನು ನಿರ್ವಹಿಸಲು, ಇಲಾಖೆಯ ವಿವಿಧ ಯೋಜನೆ ಹಾಗೂ ಕಾರ್ಯಕ್ರಮಗಳ ಆರ್ಥಿಕ ನಿರ್ವಹಣೆ ಮತ್ತು ಆಯವ್ಯಯ ಕುರಿತು ಸಮರ್ಪಕವಾದ ಹಾಗೂ ಸಂಪೂರ್ಣ ನಿರ್ವಹಣೆ, ನಿಯಂತ್ರಣ ಮತ್ತು ಉಸ್ತುವಾರಿಗಾಗಿ ಹಾಲಿ ಕಾರ್ಯನಿರ್ವಹಿಸುತ್ತಿರುವ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆ (ಮಧ್ಯಮಾವಧಿ ವಿತ್ತೀಯ ಕೋಶ)– Internal Financial Advisor, Medium Term Fiscal Plan Cell-ಯನ್ನು, ಮೇಲ್ದರ್ಜೆಗೇರಿಸಿ ಪ್ರಧಾನಕಾರ್ಯದರ್ಶಿಗಳ ನೇರ ನಿಯಂತ್ರಣ ಹಾಗೂ ಅವರ ಆಡಳಿತ ವ್ಯಾಪ್ತಿಗೊಳಪಡುವಂತೆ ಲೋಕೋಪಯೋಗಿ ಇಲಾಖೆಗೆ ಪ್ರತ್ಯೇಕವಾದ ಹಾಗೂ ಪೂರ್ಣಪ್ರಮಾಣದಲ್ಲಿ ಶಾಶ್ವತವಾಗಿ ಜಾರಿಯಲ್ಲಿರುವಂತೆ, **"**ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶ–Budget and Fiscal Monitoring Cell**"** ಎಂದು ಮರು ನಾಮಕರಣಗೊಳಿಸಿ, ಪ್ರಸ್ತುತ ಇಲಾಖೆಯಲ್ಲಿ ಮಧ್ಯಮಾವಧಿ ವಿತ್ತೀಯ ಕೋಶದ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಯನ್ನೇ, ನಿರ್ದೇಶಕರು(ಆರ್ಥಿಕ) ಹಾಗೂ ಸರ್ಕಾರದ ಪದನಿಮಿತ್ತ ಜಂಟಿಕಾರ್ಯದರ್ಶಿಗಳು–Director (Finance) & Ex-officio Joint Secretary to Govt.-Budget and Fiscal Monitoring Cell-ಹುದ್ದೆಯೆಂದು ಮೇಲ್ದರ್ಜೆಗೇರಿಸಿ, ವೇತನಶ್ರೇಣಿ:ರೂ.24450–600–26250–675–30300–750–31800ನಲ್ಲಿ ಶಾಶ್ವತವಾಗಿ ಜಾರಿಯಲ್ಲಿರುವಂತೆ ಮರುನಾಮಕರಣ ಗೊಳಿಸಿ, ಪೂರಕ ಸಿಬ್ಬಂದಿಯೊಂದಿಗೆ ಸೃಷ್ಟಿಸಲು ಈ ಮೂಲಕ ಮಂಜೂರಾತಿ ನೀಡಲಾಗಿರುತ್ತದೆ.

ಈ ರೀತಿ ಮೇಲ್ದರ್ಜೆಗೇರಿಸಿ ಸೃಜಿಸಲಾದ ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶದ ನಿರ್ದೇಶಕರು(ಆರ್ಥಿಕ) ಹಾಗೂ ಪದನಿಮಿತ್ತ ಜಂಟಿಕಾರ್ಯದರ್ಶಿಗಳ ಹುದ್ದೆಗೆ, ಪ್ರಸ್ತುತ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಮಧ್ಯಮಾವಧಿ ವಿತ್ತೀಯ ಕೋಶದ ಆಂತರಿಕ ಆರ್ಥಿಕ ಸಲಹೆಗಾರರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಆರ್.ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರನ್ನು ಹಾಲಿ ನಿರ್ವಹಿಸುತ್ತಿರುವ ಕರ್ತವ್ಯಗಳೊಂದಿಗೆ ಇಲಾಖೆಯ ಆರ್ಥಿಕ ನಿರ್ವಹಣೆ, ಉಸ್ತುವಾರಿ, ನಿಯಂತ್ರಣ ಮತ್ತು ಮೇಲ್ವಿಚಾರಣೆ, ಇಲಾಖೆಯ ಆಯವ್ಯಯ ಹಾಗೂ ವಿವಿಧ ಯೋಜನೆಗಳ ಕ್ರಿಯಾಯೋಜನೆಗಳ ತಯಾರಿಕೆ, ಅನುದಾನ ಹಾಗೂ ಹಣ ಹಂಚಿಕೆ ಹಾಗೂ ವಿತರಣೆ, ಕೋಶದ ಆಡಳಿತ ಮತ್ತು ಇನ್ನಿತರೆ ಕರ್ತವ್ಯಗಳ ನಿರ್ವಹಣೆಯ ಹೆಚ್ಚಿದ ಜವಾಬ್ದಾರಿಗಳೊಂದಿಗೆ ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶದ ನಿರ್ದೇಶಕರು(ಆರ್ಥಿಕ) ಹಾಗೂ ಪದನಿಮಿತ್ತ ಜಂಟಿಕಾರ್ಯದರ್ಶಿಗಳ ಹುದ್ದೆಗೆ ಪೂರ್ಣಪ್ರಮಾಣದಲ್ಲಿ ಶ್ರೀ ಆರ್.ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನೇಮಕ ಮಾಡಿ ಶಾಶ್ವತವಾಗಿ ವಿಲೀನಗೊಳಿಸಲಾಗಿದೆ. ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಲಿ ಕಾರ್ಯನಿರ್ವಹಿಸುತ್ತಿರುವ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆ (ಮಧ್ಯಮಾವಧಿ ವಿತ್ತೀಯ ಕೋಶ)– Internal Financial Advisor, Medium Term Fiscal Plan Cell-ಯನ್ನು, ಮೇಲ್ದರ್ಜೆಗೇರಿಸಿ ಕೆಳಕಂಡ ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶ–Budget and Fiscal Monitoring Cell-ಕೋಶವನ್ನು ಪೂರಕ ಸಿಬ್ಬಂದಿಯೊಂದಿಗೆ ಸೃಷ್ಟಿಸಲು ಮಂಜೂರಾತಿ ನೀಡಲಾಗಿದೆ.

**"ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶ**
**( Budget and Fiscal Monitoring Cell )"**

| ಕ್ರ. ಸಂ. | ಅಧಿಕಾರಿ ಹೆಸರು | ಹುದ್ದೆ : ಪದನಾಮ | ಹುದ್ದೆ ಸಂ. | ವೇತನ ಶ್ರೇಣಿ |
|---|---|---|---|---|
| 1. | ಶ್ರೀ ಆರ್.ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಇವರನ್ನು ಮೇಲ್ಕಂಡ ಕೋಶಕ್ಕೆ ನಿರ್ದೇಶಕರು (ಆರ್ಥಿಕ) ಹಾಗೂ ಸರ್ಕಾರದ ಪದನಿಮಿತ್ತ ಜಂಟಿ ಕಾರ್ಯದರ್ಶಿಗಳ ಹುದ್ದೆಗೆ ನೇಮಕ ಮಾಡಿ ಶಾಶ್ವತವಾಗಿ ವಿಲೀನಗೊಳಿಸಲಾಗಿದೆ. | ನಿರ್ದೇಶಕರು (ಆರ್ಥಿಕ) ಹಾಗೂ ಪದನಿಮಿತ್ತ ಜಂಟಿಕಾರ್ಯದರ್ಶಿಗಳು ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ | 01 (ಒಂದು) | ರೂ.24450–600–26250–675–30300–750–31800 |

**ಪೂರಕ ಸಿಬ್ಬಂದಿ ಪಟ್ಟಿ :**

| ಕ್ರ.ಸಂ. | ಹುದ್ದೆ : ಪದನಾಮ | ಹುದ್ದೆ ಸಂ. |
|---|---|---|
| 1. | ಲೆಕ್ಕ ಅಧೀಕ್ಷಕರು | 01 (ಒಂದು) |
| 2. | ಪ್ರಥಮ ಮತ್ತು ದ್ವಿತೀಯ ದರ್ಜೆ ಸಹಾಯಕರು | 01+01 (ಎರಡು) |
| 3. | ಶೀಘ್ರಲಿಪಿಗಾರರು ಮತ್ತು ಟೈಪಿಸ್ಟ್ ಕಂ ಕ್ಲರ್ಕ್ | 01+01 (ಎರಡು) |
| 4. | ಗ್ರೂಪ್ ಡಿ | 01 (ಒಂದು) |
| | ಒಟ್ಟು | **07** (ಏಳು) |

**(ಒಟ್ಟು ಏಳು ಹುದ್ದೆಗಳು)**

- ಶಾಖೆಯಲ್ಲಿ ಲೆಕ್ಕ ಪರಿಶೋಧನೆ ಹಾಗೂ ನಿರ್ವಹಣೆ ಕಾರ್ಯಕ್ಕೆ ಲೆಕ್ಕಾಧೀಕ್ಷಕರ ಹುದ್ದೆಗೆ, ರಾಜ್ಯ ಲೆಕ್ಕಪತ್ರ ಇಲಾಖೆಯಿಂದ ನಿಯೋಜನೆ.
- ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಿಂದ, ಮೇಲ್ಕಂಡ ಪೂರಕ ಸಿಬ್ಬಂದಿಗಳ ಪಟ್ಟಿಯ ಕ್ರ.ಸಂ.2, 3 ಮತ್ತು 4ರ ವರೆಗಿನ ಹುದ್ದೆಗಳ ನಿಯೋಜನೆ.
- ಆಯವ್ಯಯ ಹಾಗೂ ವಿತ್ತೀಯ ಉಸ್ತುವಾರಿ ಕೋಶದ ಅಧಿಕಾರಿಗಳ ವೇತನ, ತುಟ್ಟಿಭತ್ಯೆ, ಸಾರಿಗೆ:ವಾಹನ ಭತ್ಯೆ ಮತ್ತು ಇತರೆಭತ್ಯೆ ಹಾಗೂ ಉಳಿದ ಸಿಬ್ಬಂದಿಗಳ ವೇತನ, ತುಟ್ಟಿಭತ್ಯೆ ಮತ್ತು ಇತರೆ ಭತ್ಯೆಗಳನ್ನು ಕೇಷಿಪ್ ಲೆಕ್ಕ ಶೀರ್ಷಿಕೆಯಡಿ/ಲೋಕೋಪಯೋಗಿ ಇಲಾಖೆಯ ಲೆಕ್ಕ ಶೀರ್ಷಿಕೆಯಡಿ/ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ಲೆಕ್ಕ ಶೀರ್ಷಿಕೆಯಡಿ ಭರಿಸಬಹುದಾಗಿರುತ್ತದೆ.
- ಮೇಲ್ಕಂಡ ಕೋಶವು ಲೋಕೋಪಯೋಗಿ ಸಚಿವಾಲಯದ ಒಂದು ಭಾಗವಾಗಿದ್ದು, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಇವರ ನೇರ ನಿಯಂತ್ರಣ ಹಾಗೂ ಅವರ ಆಡಳಿತ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸತಕ್ಕದ್ದು.

ಈ ಆದೇಶವನ್ನು ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೇವಿಪ್ರಸಾದ್**

ಪಿ.ಆರ್. 2177 ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**ವಿಷಯ:** ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಮು.ಇಂ. ಸಂಕದ / ರಶಾ / ಸಇಂ4 / ಮರಳೇಗವಿ/ಮೇಲದರ್ಜೆ:2008–09 ದಿ:26.2.2008.
2. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಮು.ಇಂ. ಸಂಕದ / ರಶಾ / ಸಾಕೋ/ಸಇಂ2/2008–09 ದಿ:9.1.2009.
3. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಮು.ಇಂ. ಸಂಕದ / ರಶಾ / ಸಇಂ4 / 2009–10 ದಿ:3.6.2009.
4. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರ ಪತ್ರ ಸಂಖ್ಯೆ: ಸಿಬಿಎನ್ / ಹೈ.ಆ್ಯಸೆ:ಕಂ.ಸಂ.7: ಶಾಸಮ: ಗ್ರಾರಮೇ: ಹಾವೇರಿ ವಿಭಾಗ: 08–09/13160, ದಿ:3.2.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ರಾಮನಗರ, ಶಿವಮೊಗ್ಗ, ಚಿಕ್ಕಮಗಳೂರು, ಹಾವೇರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಗ್ರಾಮೀಣ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ನಿಗದಿತ ನಮೂನೆಯಲ್ಲಿ ಅಗತ್ಯ ನಕ್ಷೆಯೊಂದಿಗೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಹಾಗೂ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ), ಧಾರವಾಡ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| ಕ್ರ. ಸಂ. | ತಾಲ್ಲೂಕು | ಗ್ರಾಮೀಣ ರಸ್ತೆಗಳ ವಿವರ | ಉದ್ದ (ಕಿ.ಮೀ) |
|---|---|---|---|
| 1 | ರಾಮನಗರ ಜಿಲ್ಲೆ / ಕನಕಪುರ ತಾಲ್ಲೂಕು | ಕನಕಪುರ ಸಂಗಮ ರಸ್ತೆಯಿಂದ ಮರಳೇಗವಿ ಮಠ ಮತ್ತು ಮರಳೆ ಗ್ರಾಮಕ್ಕೆ ಹೋಗುವ ರಸ್ತೆ | 2.05 |
| 2. | ರಾಮನಗರ ತಾಲ್ಲೂಕು | ಬಿಡದಿ – ಮುದುವಾಡಿ ರಸ್ತೆಯಿಂದ ತೊರೆದೊಡ್ಡಿ, ಇಟ್ಟುಮಡು, ತಿಮ್ಮೇಗೌಡನದೊಡ್ಡಿ ಮುಖಾಂತರ ಬಿಡದಿ – ಹಾರೋಹಳ್ಳಿ ಸೇರುವ ರಸ್ತೆ | 4.00 |
| 3. | ಚಿಕ್ಕಮಗಳೂರು ಜಿಲ್ಲೆ / ನರಸಿಂಹರಾಜಪುರ ತಾಲ್ಲೂಕು | ರಾಜ್ಯ ಹೆದ್ದಾರಿ 65 ರಲ್ಲಿ ನರಸಿಂಹರಾಜ ಪುರದಿಂದ ಮೆಣಸೂರು ಮಾರ್ಗವಾಗಿ ರಾಜ್ಯ ಹೆದ್ದಾರಿ 65ಕ್ಕೆ ಕೂಡು ರಸ್ತೆ | 1.60 |
| 4. | ನರಸಿಂಹರಾಜಪುರ ತಾಲ್ಲೂಕು | ಎನ್.ಹೆಚ್. 13 ರಲ್ಲಿ ಮುಡಬಾ ಗ್ರಾಮದಿಂದ ಕುದುರೆಗುಂಡಿ – ಮುತ್ತಿನಕೊಪ್ಪ, ರಸ್ತೆಗೆ ಸೇರುವ ಸಂಪರ್ಕ ರಸ್ತೆ | 0.60 |

| ಕ್ರ. ಸಂ. | ತಾಲ್ಲೂಕು | ಗ್ರಾಮೀಣ ರಸ್ತೆಗಳ ವಿವರ | ಉದ್ದ (ಕಿ.ಮೀ) |
|---|---|---|---|
| 5. | ನರಸಿಂಹರಾಜಪುರ ತಾಲ್ಲೂಕು | ಸಿಂಸೆಯಿಂದ ಕಳ್ಳಿಕೊಪ್ಪ ಮಾರ್ಗವಾಗಿ ಶೆಟ್ಟಿಕೊಪ್ಪ ಸಂಪರ್ಕ ರಸ್ತೆ | 4.00 |
| 6. | ಕೊಪ್ಪ ತಾಲ್ಲೂಕು | ಕೊಪ್ಪ – ಬಾಳಗಡಿ ರಸ್ತೆ | 3.20 |
| 7. | ಕೊಪ್ಪ ತಾಲ್ಲೂಕು | ಕೊಪ್ಪ – ಗುಣವಂತೆ – ಮಕ್ಕಿಮನೆ ರಸ್ತೆ | 8.20 |
| 8. | ಹಾವೇರಿ ಜಿಲ್ಲೆ / ರಾಣೆಬೆನ್ನೂರು ತಾಲ್ಲೂಕು | ಹಲಗೇರಿ – ಹೆಡಿಯಾಲ ರಸ್ತೆ ಮಾರ್ಗ ಬೆನಕೊಂಡ – ಜೋಯಿಸರಹಳ್ಳಿ – ಸುಣಕಲ್‌ಬಿದರಿ | 18.00 |
| 9. | ರಾಣೆಬೆನ್ನೂರು ತಾಲ್ಲೂಕು | ಕಾಕೋಳು ಗ್ರಾಮದ ರಾಷ್ಟ್ರೀಯ ಹೆದ್ದಾರಿ –4 ರಿಂದ ಕಜ್ಜರಿ – ದೇವರಗುಡ್ಡ ಮುಖಾಂತರ ಬಾಗಲಕೋಟೆ ಬಿಳಿಗಿರಿರಂಗನ ಬೆಟ್ಟ (ರಾಜ್ಯ ಹೆದ್ದಾರಿ 57) ಕ್ಕೆ ಕೂಡುವ ರಸ್ತೆ | 11.00 |
| 10. | ರಾಣೆಬೆನ್ನೂರು ತಾಲ್ಲೂಕು | ಬಾಗಲಕೋಟೆ ಬಿಳಿಗಿರಿರಂಗನ ಬೆಟ್ಟ ರಾಜ್ಯ ಹೆದ್ದಾರಿ 57 ರಿಂದ ದೇವರಗುಡ್ಡ ರಸ್ತೆ | 4.00 |
| 11. | ರಾಣೆಬೆನ್ನೂರು ತಾಲ್ಲೂಕು | ದೇವರಗುಡ್ಡ ಕ್ರಾಸ್‌ನಿಂದ ಯಲ್ಲಾಪುರ ಗ್ರಾಮದ ರಸ್ತೆ | 2.50 |
| 12. | ರಾಣೆಬೆನ್ನೂರು ತಾಲ್ಲೂಕು | ರಾಷ್ಟ್ರೀಯ ಹೆದ್ದಾರಿ –4 ರಿಂದ ಅಸುಂದಿ ಕ್ರಾಸ್ ಕಜ್ಜರಿ ಗ್ರಾಮದವರೆಗಿನ ರಸ್ತೆ | 2.50 |
| | | **ಒಟ್ಟು** | **61.65** |

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಲೋಇ 374 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2009**

ರಾಮನಗರ, ಶಿವಮೊಗ್ಗ, ಚಿಕ್ಕಮಗಳೂರು, ಹಾವೇರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಈ ಕೆಳಕಂಡ 12 ಗ್ರಾಮೀಣ ರಸ್ತೆಗಳನ್ನು ಜಿಲ್ಲಾಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ. ಸಂ. | ತಾಲ್ಲೂಕು | ಗ್ರಾಮೀಣ ರಸ್ತೆಗಳ ವಿವರ | ಉದ್ದ (ಕಿ.ಮೀ) |
|---|---|---|---|
| 1 | ರಾಮನಗರ ಜಿಲ್ಲೆ / ಕನಕಪುರ ತಾಲ್ಲೂಕು | ಕನಕಪುರ ಸಂಗಮ ರಸ್ತೆಯಿಂದ ಮರಳೇಗವಿ ಮಠ ಮತ್ತು ಮರಳೆ ಗ್ರಾಮಕ್ಕೆ ಹೋಗುವ ರಸ್ತೆ | 2.05 |
| 2. | ರಾಮನಗರ ತಾಲ್ಲೂಕು | ಬಿಡದಿ – ಮುದುವಾಡಿ ರಸ್ತೆಯಿಂದ ತೊರೆದೊಡ್ಡಿ, ಇಟ್ಟುಮಡು, ತಿಮ್ಮೇಗೌಡನದೊಡ್ಡಿ ಮುಖಾಂತರ ಬಿಡದಿ – ಹಾರೋಹಳ್ಳಿ ಸೇರುವ ರಸ್ತೆ | 4.00 |
| 3. | ಚಿಕ್ಕಮಗಳೂರು ಜಿಲ್ಲೆ / ನರಸಿಂಹರಾಜಪುರ ತಾಲ್ಲೂಕು | ರಾಜ್ಯ ಹೆದ್ದಾರಿ 65 ರಲ್ಲಿ ನರಸಿಂಹರಾಜ ಪುರದಿಂದ ಮೆಣಸೂರು ಮಾರ್ಗವಾಗಿ ರಾಜ್ಯ ಹೆದ್ದಾರಿ 65ಕ್ಕೆ ಕೂಡು ರಸ್ತೆ | 1.60 |
| 4. | ನರಸಿಂಹರಾಜಪುರ ತಾಲ್ಲೂಕು | ಎನ್.ಹೆಚ್. 13 ರಲ್ಲಿ ಮುಡಬಾ ಗ್ರಾಮದಿಂದ ಕುದುರೆಗುಂಡಿ – ಮುತ್ತಿನಕೊಪ್ಪ, ರಸ್ತೆಗೆ ಸೇರುವ ಸಂಪರ್ಕ ರಸ್ತೆ | 0.60 |
| 5. | ನರಸಿಂಹರಾಜಪುರ ತಾಲ್ಲೂಕು | ಸಿಂಸೆಯಿಂದ ಕಳ್ಳಿಕೊಪ್ಪ ಮಾರ್ಗವಾಗಿ ಶೆಟ್ಟಿಕೊಪ್ಪ ಸಂಪರ್ಕ ರಸ್ತೆ | 4.00 |
| 6. | ಕೊಪ್ಪ ತಾಲ್ಲೂಕು | ಕೊಪ್ಪ – ಬಾಳಗಡಿ ರಸ್ತೆ | 3.20 |
| 7. | ಕೊಪ್ಪ ತಾಲ್ಲೂಕು | ಕೊಪ್ಪ – ಗುಣವಂತೆ – ಮಕ್ಕಿಮನೆ ರಸ್ತೆ | 8.20 |
| 8. | ಹಾವೇರಿ ಜಿಲ್ಲೆ / ರಾಣೆಬೆನ್ನೂರು ತಾಲ್ಲೂಕು | ಹಲಗೇರಿ – ಹೆಡಿಯಾಲ ರಸ್ತೆ ಮಾರ್ಗ ಬೆನಕೊಂಡ – ಜೋಯಿಸರಹಳ್ಳಿ – ಸುಣಕಲ್‌ಬಿದರಿ | 18.00 |
| 9. | ರಾಣೆಬೆನ್ನೂರು ತಾಲ್ಲೂಕು | ಕಾಕೋಳು ಗ್ರಾಮದ ರಾಷ್ಟ್ರೀಯ ಹೆದ್ದಾರಿ –4 ರಿಂದ ಕಜ್ಜರಿ – ದೇವರಗುಡ್ಡ ಮುಖಾಂತರ ಬಾಗಲಕೋಟೆ ಬಿಳಿಗಿರಿರಂಗನ ಬೆಟ್ಟ (ರಾಜ್ಯ ಹೆದ್ದಾರಿ 57) ಕ್ಕೆ ಕೂಡುವ ರಸ್ತೆ | 11.00 |
| 10. | ರಾಣೆಬೆನ್ನೂರು ತಾಲ್ಲೂಕು | ಬಾಗಲಕೋಟೆ ಬಿಳಿಗಿರಿರಂಗನ ಬೆಟ್ಟ ರಾಜ್ಯ ಹೆದ್ದಾರಿ 57 ರಿಂದ ದೇವರಗುಡ್ಡ ರಸ್ತೆ | 4.00 |

| ಕ್ರ. ಸಂ. | ತಾಲ್ಲೂಕು | ಗ್ರಾಮೀಣ ರಸ್ತೆಗಳ ವಿವರ | ಉದ್ದ (ಕಿ.ಮೀ) |
|---|---|---|---|
| 11. | ರಾಣೆಬೆನ್ನೂರು ತಾಲ್ಲೂಕು | ದೇವರಗುಡ್ಡ ಕ್ರಾಸ್‌ನಿಂದ ಯಲ್ಲಾಪುರ ಗ್ರಾಮದ ರಸ್ತೆ | 2.50 |
| 12. | ರಾಣೆಬೆನ್ನೂರು ತಾಲ್ಲೂಕು | ರಾಷ್ಟ್ರೀಯ ಹೆದ್ದಾರಿ –4 ರಿಂದ ಅಸುಂದಿ ಕ್ರಾಸ್ ಕಜ್ಜರಿ ಗ್ರಾಮದವರೆಗಿನ ರಸ್ತೆ | 2.50 |
| | | **ಒಟ್ಟು** | **61.65** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೇವಿಪ್ರಸಾದ್**

ಪಿ.ಆರ್. 2021

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ).

**ವಿಷಯ:** ತುಮಕೂರು ಜಿಲ್ಲೆ ಶಿರಾ, ಚಿಕ್ಕನಾಯಕನಹಳ್ಳಿ, ತುಮಕೂರು ತಾಲ್ಲೂಕಿನ ವ್ಯಾಪ್ತಿಯ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿರುವ ಆದೇಶವನ್ನು ರದ್ದುಪಡಿಸಿ ಗ್ರಾಮೀಣ ರಸ್ತೆಯನ್ನಾಗಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಮು.ಇಂ. ಸಂಕದ / ರಶಾ / ಸಇ4 / 2009–10 ದಿ:27.6.2009.

2. ಶ್ರೀ ಟಿ.ಬಿ. ಜಯಚಂದ್ರ, ಶಾಸಕರು, ಶಿರಾ ವಿಧಾನಸಭಾ ಕ್ಷೇತ್ರ, ಇವರ ಪತ್ರ ದಿ:2.7.2009 ಹಾಗೂ 15.6.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ತುಮಕೂರು ಜಿಲ್ಲೆ ಶಿರಾ, ಚಿಕ್ಕನಾಯಕನಹಳ್ಳಿ, ತುಮಕೂರು ತಾಲ್ಲೂಕಿನ ವ್ಯಾಪ್ತಿಯ ಈ ಕೆಳಕಂಡ 9 ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಲಾಗಿದ್ದು, ಅನುದಾನದ ಕೊರತೆಯಿಂದ ಸಮರ್ಪಕ ನಿರ್ವಹಣೆ ಇಲ್ಲದೇ ಈ ರಸ್ತೆಗಳು ತುಂಬಾ ಹದಗೆಟ್ಟಿದ್ದು ಸಾರ್ವಜನಿಕರು ಹಾಗೂ ರೈತರು ತೀವ್ರ ತೊಂದರೆಗೊಳಗಾಗಿದ್ದಾರೆ ಮತ್ತು ಕಒಉಖಜ ಯೋಜನೆಯಡಿಯಲ್ಲಿ ಅಭಿವೃದ್ಧಿಪಡಿಸಲು ಅನುಕೂಲವಾಗುವುದೆಂದು ಸ್ಥಳೀಯ ಶಾಸಕರು ಪತ್ರದೊಂದಿಗೆ ಕೆಳದರ್ಜೆಗಿಳಿಸಲು ಮನವಿ ಸಲ್ಲಿಸಿದ್ದರಿಂದ ಸದರಿ 9 ರಸ್ತೆಗಳನ್ನು ಲೋಕೋಪಯೋಗಿ ಇಲಾಖೆ ವಶಕ್ಕೆ ತೆಗೆದುಕೊಂಡಿರುವುದನ್ನು ಕೈಬಿಟ್ಟು ಕೆಳದರ್ಜೆಗಿಳಿಸಲು (Denotify) ಪ್ರಸ್ತಾವನೆಯನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಸಲ್ಲಿಸಿರುತ್ತಾರೆ.

| ಕ್ರ. ಸಂ. | ತಾಲ್ಲೂಕಿನ ಹೆಸರು | ವಿಧಾನಸಭಾ ಕ್ಷೇತ್ರದ ಹೆಸರು | ಡಿ–ನೋಟಿಫೈ ಮಾಡಲು ಪರಿಗಣಿಸಿರುವ ರಸ್ತೆಗಳ ಹೆಸರು | ರಸ್ತೆಗಳ ಉದ್ದ ಕಿ.ಮೀ. ಗಳಲ್ಲಿ | | | ಮೇಲ್ದರ್ಜೆ ಗೇರಿಸಿರುವ ಸರ್ಕಾರಿ ಆದೇಶ |
|---|---|---|---|---|---|---|---|
| | | | | ಸರಪಳಿ ಪ್ರಾರಂಭ | ಸರಪಳಿ ಮುಕ್ತಾಯ | ಒಟ್ಟು ಉದ್ದ ಕಿ.ಮೀ. ಗಳಲ್ಲಿ | |
| 1 | ಶಿರಾ | ಶಿರಾ | ಎನ್.ಎಸ್. ರಸ್ತೆಯಿಂದ ತರೂರು, ಗುಂಜಪ್ಪನದೇವಸ್ಥಾನ ಮಾರ್ಗವಾಗಿ ಕೊರಟಗೆರೆ ತಾ: ಗಡಿಗೆ ಸೇರುವ ರಸ್ತೆ | 0.00 | 4.00 | 4.00 | ಸಂ: ಲೋಇ 468 ಸಿಆರ್‌ಎಂ 2007, ದಿ:4.10.2007 |
| 2 | ಶಿರಾ | ಶಿರಾ | ಹರಿಯಜ್ಜನಹಳ್ಳಿಯಿಂದ ಗೋನಿಹಳ್ಳಿ ಮಾರ್ಗವಾಗಿ ಹಾರೋಗೆರೆಗೆ ಸೇರುವ ರಸ್ತೆ | 0.00 | 6.00 | 6.00 | – ಅದೇ – |
| 3 | ಶಿರಾ | ಶಿರಾ | ಎನ್.ಹೆಚ್. –04 ರಸ್ತೆಯಿಂದ ಯಲದಬಾಗಿ ಮಾರ್ಗವಾಗಿ ಬ್ಯಾಡರಹಳ್ಳಿಗೆ ಸೇರುವ ರಸ್ತೆ | 10.00 | 15.00 | 5.00 | – ಅದೇ – |
| 4 | ಚಿಕ್ಕನಾಯಕನಹಳ್ಳಿ | ಶಿರಾ | ಚಿಕ್ಕನಾಯಕನಹಳ್ಳಿ – ಹಾಗಲವಾಡಿ ರಸ್ತೆಯಿದ ತಿಮ್ಮನಹಳ್ಳಿ ಮಾರ್ಗ ಸಾಲ್ಕಟ್ಟೆ ಬೆಳ್ಳಾರ ರಸ್ತೆಗೆ ಸೇರುವ ರಸ್ತೆ | 0.00 | 14.50 | 14.50 | ಸಂ: ಲೋಇ 262 ಸಿಆರ್‌ಎಂ 2001 ದಿ:24.9.2003 (ತುಮಕೂರು ಜಿಲ್ಲೆ ಕ್ರ.ಸಂ. 12) |
| 5 | ತುಮಕೂರು | ತುಮಕೂರು ಗ್ರಾಮಾಂತರ | ಕೆ.ಕೆ. ರಸ್ತೆಯಿಂದ ಬೇಗೂರು ರಾಮನಹಳ್ಳಿ ಮಾರ್ಗ ಬೊಮ್ಮನಹಳ್ಳಿ ಕ್ರಾಸ್‌ವರೆಗೆ ಸೇರುವ ರಸ್ತೆ | 0.00 | 20.00 | 20.00 | ಸಂ:ಲೋಇ ಸಿಆರ್‌ಎಂ 15 2007, ಬೆಂಗಳೂರು ದಿ:11.1.2007 |

| ಕ್ರ. ಸಂ. | ತಾಲ್ಲೂಕಿನ ಹೆಸರು | ವಿಧಾನಸಭಾ ಕ್ಷೇತ್ರದ ಹೆಸರು | ಡಿ–ನೋಟಿಫೈ ಮಾಡಲು ಪರಿಗಣಿಸಿರುವ ರಸ್ತೆಗಳ ಹೆಸರು | ರಸ್ತೆಗಳ ಉದ್ದ ಕಿ.ಮೀ. ಗಳಲ್ಲಿ | | | ಮೇಲ್ದರ್ಜೆ ಗೇರಿಸಿರುವ ಸರ್ಕಾರಿ ಆದೇಶ |
|---|---|---|---|---|---|---|---|
| | | | | ಸರಪಳಿ ಪ್ರಾರಂಭ | ಸರಪಳಿ ಮುಕ್ತಾಯ | ಒಟ್ಟು ಉದ್ದ ಕಿ.ಮೀ. ಗಳಲ್ಲಿ | |
| 6 | ತುಮಕೂರು | ತುಮಕೂರು ಗ್ರಾಮಾಂತರ | ಕೆ.ಕೆ. ರಸ್ತೆಯಿಂದ ಲಕ್ಕೇನಹಳ್ಳಿ ತಾವರೇಕೆರೆ ಹೊನ್ನೇನಹಳ್ಳಿ ಮಾರ್ಗ ಕಲ್ಯಾಣಪುರ ರಸ್ತೆ | 0.00 | 20.00 | 20.00 | ಸಂ:ಲೋಇ ಸಿಆರ್‌ಎಂ 15 2007, ಬೆಂಗಳೂರು ದಿ:11.1.2007 |
| 7 | ತುಮಕೂರು | ತುಮಕೂರು ಗ್ರಾಮಾಂತರ | ಹೊನ್ನುಡಿಕೆ ಹ್ಯಾಂಡ್ ಪೋಸ್ಟ್‌ನಿಂದ ನರಗನಹಳ್ಳಿ ಮಳ್ಳಕುಂಟೆ ಚಿಕ್ಕಪುರ ಮಾರ್ಗ ತೊಂಡೆಗೆರೆ ರಸ್ತೆ | 0.00 | 22.00 | 22.00 | – ಅದೇ – |
| 8 | ತುಮಕೂರು | ತುಮಕೂರು ಗ್ರಾಮಾಂತರ | ರಾಜ್ಯ ಹೆದ್ದಾರಿ – 33 ಯಿಂದ ಶಾಂತಪುರ ಬಿಸಲಹಳ್ಳಿ ಮಾರ್ಗ ಹೆಬ್ಬೂರು ಕಲ್ಲೂರು ರಸ್ತೆಗೆ ಸೇರುವ ರಸ್ತೆ (ಶಾಂತಪುರ ರಸ್ತೆಯಿಂದ ಹೆಬ್ಬೂರು ಕಲ್ಲೂರು ರಸ್ತೆವರೆಗೆ ಮಾತ್ರ) | 4.00 | 6.00 | 2.00 | – ಅದೇ – |
| 9 | ತುಮಕೂರು | ತುಮಕೂರು ಗ್ರಾಮಾಂತರ | ಹಾಲನೂರು ಗೂಳೂರು ಹರಳೂರು ರಸ್ತೆ (ಗಂಗಸಂದ್ರ ರಸ್ತೆಯಿಂದ ಗೂಳೂರು ಮತ್ತು ರಾಜ್ಯ ಹೆದ್ದಾರಿ – 94 ಯಿಂದ ಹರಳೂರು) | 5.00<br>25.00 | 10.00<br>28.00 | 5.00<br>3.00 | – ಅದೇ – |

ಮೇಲ್ಕಂಡ ರಸ್ತೆಗಳ ಅಭಿವೃದ್ಧಿಗೆ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಪ್ರಧಾನ ಮಂತ್ರಿ ಗ್ರಾಮೀಣ ರಸ್ತೆ ಯೋಜನೆಯಡಿಯಲ್ಲಿ ಅನುದಾನ ದೊರೆಯುತ್ತಿರುವುದರಿಂದ ಸದರಿ ರಸ್ತೆಗಳನ್ನು ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸುವ ಆದೇಶವನ್ನು ಹಿಂತೆಗೆದುಕೊಂಡು ಪುನಃ ಗ್ರಾಮೀಣ ರಸ್ತೆಗಳನ್ನಾಗಿ ಪರಿವರ್ತಿಸಲು ಕೋರಲಾಗಿದೆ. ಸರ್ಕಾರವು ಸದರಿ ಮನವಿಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಸಿಸಿದೆ.

**ಸರ್ಕಾರದ ಆದೇಶ ಸಂ: ಲೋಇ 374 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂ: ಲೋಇ 468 ಸಿಆರ್‌ಎಂ 2007, ದಿನಾಂಕ:4.10.2007 ಹಾಗೂ ಸಂ:ಲೋಇ ಸಿಆರ್‌ಎಂ 15 2007, ಬೆಂಗಳೂರು ದಿ:11.1.2007 ರಲ್ಲಿ ಜಿಲ್ಲಾ ಮುಖ್ಯ ರಸ್ತೆಗಳನ್ನಾಗಿ ಮೇಲ್ದರ್ಜೆಗೇರಿಸಿ ಲೋಕೋಪಯೋಗಿ ಇಲಾಖೆಯ ವಶಕ್ಕೆ ತೆಗೆದುಕೊಂಡಿರುವ ಈ ಕೆಳಕಂಡ 9 ರಸ್ತೆಗಳ 101.50 ಕಿ.ಮೀ. ಉದ್ದದ ರಸ್ತೆಗಳನ್ನು ದಿ: 4.10.2007 ಹಾಗೂ 11.1.2007 ರ ಸರ್ಕಾರಿ ಆದೇಶದ ವ್ಯಾಪ್ತಿಯಿಂದ ಕೈಬಿಟ್ಟು ಈ ಕೆಳಗೆ ತೋರಿಸಿರುವ 9 ಗ್ರಾಮೀಣ ರಸ್ತೆಗಳನ್ನಾಗಿ ಮುಂದುವರೆಸಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಶಕ್ಕೆ ನೀಡಲಾಗಿದೆ.

| ಕ್ರ. ಸಂ. | ತಾಲ್ಲೂಕಿನ ಹೆಸರು | ವಿಧಾನಸಭಾ ಕ್ಷೇತ್ರದ ಹೆಸರು | ಡಿ–ನೋಟಿಫೈ ಮಾಡಲು ಪರಿಗಣಿಸಿರುವ ರಸ್ತೆಗಳ ಹೆಸರು | ರಸ್ತೆಗಳ ಉದ್ದ ಕಿ.ಮೀ. ಗಳಲ್ಲಿ | | | ಮೇಲ್ದರ್ಜೆ ಗೇರಿಸಿರುವ ಸರ್ಕಾರಿ ಆದೇಶ |
|---|---|---|---|---|---|---|---|
| | | | | ಸರಪಳಿ ಪ್ರಾರಂಭ | ಸರಪಳಿ ಮುಕ್ತಾಯ | ಒಟ್ಟು ಉದ್ದ ಕಿ.ಮೀ. ಗಳಲ್ಲಿ | |
| 1 | ಶಿರಾ | ಶಿರಾ | ಎನ್.ಎಸ್. ರಸ್ತೆಯಿಂದ ತರೂರು, ಗುಂಜಪ್ಪನದೇವಸ್ಥಾನ ಮಾರ್ಗವಾಗಿ ಕೊರಟಗೆರೆ ತಾ: ಗಡಿಗೆ ಸೇರುವ ರಸ್ತೆ | 0.00 | 4.00 | 4.00 | ಸಂ: ಲೋಇ 468 ಸಿಆರ್‌ಎಂ 2007, ದಿ:4.10.2007 |
| 2 | ಶಿರಾ | ಶಿರಾ | ಹರಿಯಜ್ಜನಹಳ್ಳಿಯಿಂದ ಗೋನಿಹಳ್ಳಿ ಮಾರ್ಗವಾಗಿ ಹಾರೋಗೆರೆಗೆ ಸೇರುವ ರಸ್ತೆ | 0.00 | 6.00 | 6.00 | – ಅದೇ – |
| 3 | ಶಿರಾ | ಶಿರಾ | ಎನ್.ಹೆಚ್. –04 ರಸ್ತೆಯಿಂದ ಯಲದಬಾಗಿ ಮಾರ್ಗವಾಗಿ ಬ್ಯಾಡರಹಳ್ಳಿಗೆ ಸೇರುವ ರಸ್ತೆ | 10.00 | 15.00 | 5.00 | – ಅದೇ – |
| 4 | ಚಿಕ್ಕನಾಯಕನಹಳ್ಳಿ | ಶಿರಾ | ಚಿಕ್ಕನಾಯಕನಹಳ್ಳಿ – ಹಾಗಲವಾಡಿ ರಸ್ತೆಯಿದ ತಿಮ್ಮನಹಳ್ಳಿ ಮಾರ್ಗ ಸಾಲ್ಕಟ್ಟೆ ಬೆಳ್ಳಾರ ರಸ್ತೆಗೆ ಸೇರುವ ರಸ್ತೆ | 0.00 | 14.50 | 14.50 | ಸಂ: ಲೋಇ 262 ಸಿಆರ್‌ಎಂ 2001 ದಿ:24.9.2003 (ತುಮಕೂರು ಜಿಲ್ಲೆ ಕ್ರ.ಸಂ. 12) |

| ಕ್ರ. ಸಂ. | ತಾಲ್ಲೂಕಿನ ಹೆಸರು | ವಿಧಾನಸಭಾ ಕ್ಷೇತ್ರದ ಹೆಸರು | ಡಿ–ನೋಟಿಫೈ ಮಾಡಲು ಪರಿಗಣಿಸಿರುವ ರಸ್ತೆಗಳ ಹೆಸರು | ರಸ್ತೆಗಳ ಉದ್ದ ಕಿ.ಮೀ. ಗಳಲ್ಲಿ | | | ಮೇಲ್ದರ್ಜೆ ಗೇರಿಸಿರುವ ಸರ್ಕಾರಿ ಆದೇಶ |
|---|---|---|---|---|---|---|---|
| | | | | ಸರಪಳಿ ಪ್ರಾರಂಭ | ಸರಪಳಿ ಮುಕ್ತಾಯ | ಒಟ್ಟು ಉದ್ದ ಕಿ.ಮೀ. ಗಳಲ್ಲಿ | |
| 5 | ತುಮಕೂರು | ತುಮಕೂರು ಗ್ರಾಮಾಂತರ | ಕೆ.ಕೆ. ರಸ್ತೆಯಿಂದ ಬೇಗೂರು ರಾಮನಹಳ್ಳಿ ಮಾರ್ಗ ಬೊಮ್ಮನಹಳ್ಳಿ ಕ್ರಾಸ್‌ವರೆಗೆ ಸೇರುವ ರಸ್ತೆ | 0.00 | 20.00 | 20.00 | ಸಂ:ಲೋಇ ಸಿಆರ್‌ಎಂ 15 2007, ಬೆಂಗಳೂರು ದಿ:11.1.2007 |
| 6 | ತುಮಕೂರು | ತುಮಕೂರು ಗ್ರಾಮಾಂತರ | ಕೆ.ಕೆ. ರಸ್ತೆಯಿಂದ ಲಕ್ಕೇನಹಳ್ಳಿ ತಾವರೇಕೆರೆ ಹೊನ್ನೇನಹಳ್ಳಿ ಮಾರ್ಗ ಕಲ್ಯಾಣಪುರ ರಸ್ತೆ | 0.00 | 20.00 | 20.00 | – ಅದೇ – |
| 7 | ತುಮಕೂರು | ತುಮಕೂರು ಗ್ರಾಮಾಂತರ | ಹೊನ್ನುಡಿಕೆ ಹ್ಯಾಂಡ್ ಪೋಸ್ಟ್‌ನಿಂದ ನರಗನಹಳ್ಳಿ ಮಳ್ಳಕುಂಟಿ ಚಿಕ್ಕಪುರ ಮಾರ್ಗ ತೊಂಡೆಗೆರೆ ರಸ್ತೆ | 0.00 | 22.00 | 22.00 | – ಅದೇ – |
| 8 | ತುಮಕೂರು | ತುಮಕೂರು ಗ್ರಾಮಾಂತರ | ರಾಜ್ಯ ಹೆದ್ದಾರಿ – 33 ಯಿಂದ ಶಾಂತಪುರ ಬಿಸಲಹಳ್ಳಿ ಮಾರ್ಗ ಹೆಬ್ಬೂರು ಕಲ್ಲೂರು ರಸ್ತೆಗೆ ಸೇರುವ ರಸ್ತೆ (ಶಾಂತಪುರ ರಸ್ತೆಯಿಂದ ಹೆಬ್ಬೂರು ಕಲ್ಲೂರು ರಸ್ತೆವರೆಗೆ ಮಾತ್ರ) | 4.00 | 6.00 | 2.00 | – ಅದೇ – |
| 9 | ತುಮಕೂರು | ತುಮಕೂರು ಗ್ರಾಮಾಂತರ | ಹಾಲನೂರು ಗೂಳೂರು ಹರಳೂರು ರಸ್ತೆ (ಗಂಗಸಂದ್ರ ರಸ್ತೆಯಿಂದ ಗೂಳೂರು ಮತ್ತು ರಾಜ್ಯ ಹೆದ್ದಾರಿ – 94 ಯಿಂದ ಹರಳೂರು) | 5.00<br>25.00 | 10.00<br>28.00 | 5.00<br>3.00 | – ಅದೇ – |
| | | | **ಒಟ್ಟು ಕಿ.ಮೀ. ಗಳು** | | | **101.50** | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೇವಿಪ್ರಸಾದ್**

ಪಿ.ಆರ್. 2064 ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ತಿದ್ದೋಲೆ ಸಂ: ಸಿಆಸುಇ 42 ಸೇಉನ್ಯಾ 2009, ಬೆಂಗಳೂರು, ದಿನಾಂಕ: 1ನೇ ಆಗಸ್ಟ್ 2009**

ಅಧಿಸೂಚನೆ ಸಂ: ಸಿಆಸುಇ 42 ಸೇಉನ್ಯಾ 2009, ದಿನಾಂಕ: 02.07.2009ರಲ್ಲಿನ ಕ್ರಮ ಸಂ: 1ರ ಕಾಲಂ 4 ರಲ್ಲಿನ ನಮೂದುಗಳನ್ನು "**Presiding Officer, Additional Industrial Tribunal, Bangalore City"** ಎಂದು ದಿನಾಂಕ:02.07.2009 ರಿಂದಲೇ ಜಾರಿಗೆ ಬರುವಂತೆ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1925 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–3)

## INFRASTRUCTURE DEVELOPMENT SECRETARIAT

**ADDENDUM No. IDD 115 ITS 2008, Bangalore, Dated: 11th August 2009**

The words in the last para of the order portion of GOVERNMENT ORDER No. ID/115/ITS/2008, Bangalore, Dated 17.07.2009 i.e. " The Order issues with the concurrence of FD " shall be substituted by the following words and read as "This order falls within the preview of the proviso to sub-rule (2) of rule 17 of the Karnataka Government (Transaction of Business) Rules, 1977" and is issued accordingly" shall be substituted.

Other paras in the order portion of the G.O. remains unchanged.

By Order and in the name of the Governor of Karnataka,

**N. MANJULA GEETHA**

P.R. 1943 Under Secretary to Government,

Infrastructure Development Department.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ರೇಷ್ಮೆ ಇಲಾಖೆಯ ವಿವಿಧ ಸಂಸ್ಥೆಗಳಲ್ಲಿ ನಿರ್ವಹಿಸುವ ಕೆಲಸ ಕಾರ್ಯಗಳಿಗೆ ಕಾರ್ಯಾಧಾರಿತ ದರ ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ವಾಕೈ 42 ರೇಯೋವಿ 2001, ದಿನಾಂಕ: 28.09.2001.

2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು, ಹಾಗೂ ನಿರ್ದೇಶಕರು, ಇವರ ಪತ್ರ ಸಂಖ್ಯೆ:ರೇಕೃಕ್ಷೇ/ಬಿಕೋ/ ಗು.ಆ.ಕೆ.ನಿ./24/07/08, ದಿನಾಂಕ: 19/12/2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಸರ್ಕಾರಿ ಆದೇಶದಲ್ಲಿ ರೇಷ್ಮೆ ಇಲಾಖೆಯ ವಿವಿಧ ಕ್ಷೇತ್ರಗಳ ಮತ್ತು ಸಂಸ್ಥೆಗಳ ಕೆಲಸ ಕಾರ್ಯಗಳನ್ನು ಕಾರ್ಯಾಧಾರಿತ ದರಗಳ ಮೇಲೆ ನಿರ್ವಹಿಸಲು ಕಾರ್ಯಾಧಾರಿತ ದರವನ್ನು ನಿಗದಿಪಡಿಸಲಾಗಿತ್ತು. ಸದರಿ ದರಗಳು ಪ್ರಸ್ತುತ ಕ್ಷೇತ್ರ ಮಟ್ಟದಲ್ಲಿ ಚಾಲ್ತಿ ಇವರ ದರಗಳಿಗೆ ಹೋಲಿಸಿದಲ್ಲಿ ಕಡಿಮೆ ಇರುವ ಕಾರಣ ಸದರಿ ದರಗಳನ್ನು ಪರಿಷ್ಕರಿಸುವುದು ಅವಶ್ಯಕವಾದ್ದರಿಂದ ಈ ಬಗ್ಗೆ ಒಂದು ಸಮಿತಿಯನ್ನು ರಚಿಸಿ, ದರ ಪರಿಷ್ಕರಣೆಗೆ ಇಲಾಖೆಯು ಪರಿಶೀಲಿಸಿದ್ದು, ಕಾರ್ಮಿಕ ಇಲಾಖೆಯ ಅಧಿಸೂಚನೆಯಲ್ಲಿರುವ ದರಗಳನ್ನು ತಾಂತ್ರಿಕ, ಮತ್ತು ಕಠಿಣ ಪರಿಶ್ರಮದ ಕೆಲಸಗಳಿಗೆ ಕ್ಷೇತ್ರ ಮಟ್ಟದಲ್ಲಿ ಚಾಲ್ತಿಯಲ್ಲಿರುವ ದರಗಳನ್ನು ಗಣನೆಗೆ ತೆಗೆದುಕೊಂಡು ಇಲಾಖೆಯ ವಿವಿಧ ಕ್ಷೇತ್ರಗಳ ಮತ್ತು ಸಂಸ್ಥೆಗಳ ಕೆಲಸಗಳನ್ನು ಸುಗಮವಾಗಿ ಮುಂದುವರೆಸಲು ವಿವಿಧ ಕೆಲಸಕಾರ್ಯಗಳನ್ನು ಗುರುತಿಸಿ, ಗ್ರಾಹಕರ ಬೆಲೆಗಳ ಆಧಾರದಲ್ಲಿ ಜೀವನ ನಿರ್ವಹಣಾ ಭತ್ಯೆಯನ್ನು ಗಮನದಲ್ಲಿಟ್ಟುಕೊಂಡು ಕನಿಷ್ಠ ವೇತನ ಕಾಯ್ದೆಯ ಹಿನ್ನೆಲೆಯಲ್ಲಿ ವಿವಿಧ ಕೆಲಸ ಕಾರ್ಯಗಳಿಗೆ ದರಪಟ್ಟಿಯನ್ನು ತಯಾರಿಸಿ, ಪರಿಷ್ಕರಿಸಿರುವುದಾಗಿ ತಿಳಿಸಿ, ಸದರಿ ಪರಿಷ್ಕೃತ ದರಗಳ ಅನುಸೂಚಿಗೆ ಸರ್ಕಾರದ ಅನುಮೋದನೆ ನೀಡುವಂತೆ ಹಾಗೂ 1 ರಿಂದ 7 ರವರೆಗಿನ ಅನುಬಂಧಗಳನ್ನು ಲಗತ್ತಿಸಿ ಅದನ್ನು ಜಾರಿಗೊಳಿಸಲು ಅನುಮತಿ ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ರೇಷ್ಮೆ ಇಲಾಖೆಯ ವಿವಿಧ ಸಂಸ್ಥೆಗಳಲ್ಲಿ ನಿರ್ವಹಿಸುವ ಕೆಲಸ ಕಾರ್ಯಗಳಿಗೆ ಕಾರ್ಯಾಧಾರಿತ ದರವನ್ನು 2001ನೇ ಸಾಲಿನಲ್ಲಿ ನಿಗದಿಪಡಿಸಲಾಗಿದ್ದು, ಗ್ರಾಹಕರ ಬೆಲೆ ಸೂಚ್ಯಾಂಕದನ್ವಯ ಕಾರ್ಮಿಕ ಇಲಾಖೆಯು ಹೊರಡಿಸಿರುವ ದರಗಳನ್ವಯ ದರಪಟ್ಟಿಯನ್ನು ಇಲಾಖೆಯು ಸಿದ್ಧಪಡಿಸಿರುವುದಾಗಿಯೂ ಹಿಪ್ಪುನೇರಳೆ ಬೇಸಾಯ ಹಾಗೂ ಹುಳು ಸಾಕಾಣಿಕೆಗೆ ಸಂಬಂಧಿಸಿದ ದರಗಳು ಕಾರ್ಮಿಕ ಇಲಾಖೆಯು ಅನುಮೋದಿಸುವ ದರಗಳಿಗೆ ತಾಳೆಯಾಗುತ್ತದೆ. ರೀಲಿಂಗ್ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಕಾರ್ಮಿಕ ಇಲಾಖೆಯು ದರಗಳನ್ನು ನಿಗಿದಿಪಡಿಸಿಲ್ಲದ ಕಾರಣ, ರೇಷ್ಮೆ ಇಲಾಖೆಯು ದರಗಳನ್ನು ನಮೂದಿಸಿದ ಬಗ್ಗೆ ತಿಳಿಸಿದ್ದು, ಈ ವೆಚ್ಚವನ್ನು ಕಾರ್ಯಾಧಾರಿತ ದರದಲ್ಲಿ ಕೆಲಸ ನಿರ್ವಹಿಸಲು ನಗದಿಪಡಿಸಿರುವ ಅನುದಾನದ ಮಿತಿಯಲ್ಲಿಯೇಭರಿಸುವುದಾಗಿ ಇಲಾಖೆಯು ತಿಳಿಸಿರುವ ಹಿನ್ನೆಲೆಯಲ್ಲಿ ಇಲಾಖೆಯು ಪ್ರಸ್ತಾವಿಸಿರುವ ಕಾರ್ಯಾಧಾರಿತ ದರಗಳನ್ನು ಪರಿಶೀಲಿಸಿ ಅದನ್ನು ಅನುಮೋದಿಸಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ವಾಕೈ 9 ರೇಯೋವಿ 2008, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರೇಷ್ಮೆ ಇಲಾಖೆಯ ವಿವಿಧ ಕ್ಷೇತ್ರಗಳ ಮತ್ತು ಸಂಸ್ಥೆಗಳ ಕೆಲಸ ಕಾರ್ಯಗಳನ್ನು ಸುಗಮವಾಗಿ ನಿರ್ವಹಿಸಿಕೊಂಡು ಹೋಗಲು ವಿವಿಧ ಸಂಸ್ಥೆಗಳಲ್ಲಿ ನಿರ್ವಹಿಸುವ ಕೆಲಸ ಕಾರ್ಯಗಳಿಗೆ ಪರಿಷ್ಕೃತ ಕಾರ್ಯಾಧಾರಿತ ದರವನ್ನು ಅನುಬಂಧ 1 ರಿಂದ 7ರಲ್ಲಿರುವಂತೆ ಪರಿಷ್ಕರಿಸುವುದಕ್ಕೆ ಈ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರಾತಿ ನೀಡಿದೆ.

1. ಅನುಬಂಧದಲ್ಲಿ ನಮೂದಿಸಿರುವ ದರಗಳು ವರ್ಷಕ್ಕೆ ಒಂದು ಬಾರಿ ಗ್ರಾಹಕರ ಬೆಲೆ ಸೂಚ್ಯಾಂಕದ ಆಧಾರವನ್ನು ಅವಲಂಭಿಸಿ ಪರಿಷ್ಕರಿಸುವಂತಹದ್ದಾಗಿರುತ್ತದೆ.
2. ಪ್ರತಿ ಸಂಸ್ಥೆಯ ಮುಖ್ಯಸ್ಥರು ವಾರ್ಷಿಕ ನಿರ್ವಹಣೆಗೆ ಆಯಾಯ ಸಂಸ್ಥೆಯ ಕೆಲಸ ಕಾರ್ಯಗಳಿಗೆ ದರಪಟ್ಟಿಯನ್ನು ಪಡೆಯಲು ಟೆಂಡರ್ ಕರೆಯುವುದು. ಕಡಿಮೆ ದರ ನೀಡುವ ಸಂಘ ಸಂಸ್ಥೆಗೆ ಕರಾರು ಒಪ್ಪಂದ ಮಾಡಿ ಕೆಲಸದ ಆದೇಶ ನೀಡುವುದು. ಪ್ರತಿ ಮಾಹೆಯಲ್ಲಿ ಮುಗಿಯುವ ಕೆಲಸಕ್ಕೆ ಹಣ ಪಾವತಿಸುವುದು. ದರ ಒಪ್ಪಂದ ಮಾಡಿಕೊಂಡ ಸಂಸ್ಥೆಯಿಂದ ಪೂರ್ಣ ಮೊಬಲಗಿನ ಶೇಕಡ 10 ರಷ್ಟನ್ನು ಭದ್ರತಾ ಠೇವಣಿಯಾಗಿ ಪಡೆಯುವುದು.
3. ಸಂಘ ಸಂಸ್ಥೆಗಳು ನೀಡುವ ದರಗಳು, ಅನುಸೂಚಿಯ ದರಗಳು ಅಥವಾ ಅದಕ್ಕಿಂತ ಕಡಿಮೆ ಇದ್ದಲ್ಲಿ, ಆಯಾ ಸಂಸ್ಥೆಯ ಪರಿಶೀಲನಾ ಅಧಿಕಾರಿಗಳು ಅಂಗೀಕರಿಸುವುದು. ನೀಡಿದ ದರಗಳು ಅನುಸೂಚಿಯ ದರಕ್ಕಿಂತ

ಶೇಕಡಾ 10 ಭಾಗಕ್ಕಿಂತ ಹೆಚ್ಚಾಗಿದ್ದಲ್ಲಿ ವಿಭಾಗೀಯ ಜಂಟಿ ನಿರ್ದೇಶಕರು, ಶೇಕಡಾ 10 ಭಾಗಕ್ಕಿಂತ ಹೆಚ್ಚಾಗಿದ್ದು, ಶೇಕಡ 20 ಕ್ಕಿಂತ ಕಡಿಮೆ ಇದ್ದಲ್ಲಿ, ಇಲಾಖೆಯ ಮುಖ್ಯಸ್ಥರಿಂದ ಅನುಮೋದನೆ ಪಡೆಯುವುದು.

4. ವಿವಿಧ ಕೆಲಸಕಾರ್ಯಗಳಿಗೆ ಪ್ರಸ್ತಾವಿತ ಕಾರ್ಯಾಧಾರಿತ ದರಪಟ್ಟಿಯು ಕಾರ್ಮಿಕ ಇಲಾಖೆಯು ಪ್ರತಿವರ್ಷ ಹೊರಡಿಸುವ ಕನಿಷ್ಟ ವೇತನ ಕಾಯ್ದೆ ಮತ್ತು ಸಿ.ಪಿ.ಐ. ಪ್ರಕಾರ ಇರತಕ್ಕದ್ದು.
5. ಕಾಯಾಧಾರಿತ ದರದಲ್ಲಿ ಕೆಲಸ ನಿರ್ವಹಿಸಲು ನಿಗದಿಪಡಿಸಿರುವ ಅನುದಾನದ ಮಿತಿಯಲ್ಲಿಯೇ ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1420 ವೆಚ್ಚ – 106, ದಿನಾಂಕ 1.12.2008 ರಲ್ಲಿ ನೀಡಿರುವ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಅದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅನುಬಂಧ – 1**

**ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರಗಳ ಕೆಲಸದ ಪ್ರಮಾಣ ಮತ್ತು ದರ ವಿಶ್ಲೇಷಣೆ**

| ಕ್ರ. ಸಂ. | ಕೆಲಸದ ವಿವರ | ಮಾನವ ದಿನಗಳು | ಘಟಕ ಪ್ರಮಾಣ | ದರ (ರೂ.ಗಳಲ್ಲಿ) | ಷರಾ |
|---|---|---|---|---|---|
| 1. | ಭೂಮಿಯನ್ನು 11/2–2 ಅಡಿ ಆಳವಾಗಿ ಉಳುಮೆ ಮಾಡುವುದು<br>ಅ) ಟ್ರ್ಯಾಕ್ಟರ್ ಬಳಸಿ ಡಿಸ್ಕ್ ಉಳುಮೆ<br>ಆ) ಡಿಸ್ಕ್ ಉಳುಮೆ ನಂತರ ಟ್ರ್ಯಾಕ್ಟರ್ ಬಳಸಿ ಕಲ್ಟಿವೇಟರ್ ಉಳುಮೆ | 3 ಗಂಟೆಗಳು<br>1 1/2 ಗಂಟೆ | 1 ಎಕರೆ<br>1 ಎಕರೆ | 2100–00<br>1050–00 | ಗಂಟೆಗೆ ರೂ. 700–00<br>ಗಂಟೆಗೆ ರೂ. 700–00 |
| 2. | ಎತ್ತುಗಳಿಂದ ಉಳುಮೆ ಮಾಡುವುದು | 2 ದಿನ | 1 ಎಕರೆ | 600–00 | 1 ಜೊತೆ ಎತ್ತಿಗೆ ರೂ. 300–00 |
| 3. | ಹೆಂಟೆ ಒಡೆದು, ಕಳೆ ತೆಗೆದು ಸ್ವಚ್ಛಗೊಳಿಸುವುದು | 10 ಮಾ.ದಿನ | 1 ಎಕರೆ | 1050–00 | ದರ ರೂ. 105.00 |
| 4. | ಭೂಮಿಯನ್ನು ಸಮತಟ್ಟು ಮಾಡಿ ಪಾತಿಗಳನ್ನು ಮಾಡುವುದು | 6 ಮಾ.ದಿನ | 1 ಎಕರೆ | 900–00 | ದರ ರೂ. 150–00 |
| 5. | ಹಿಪ್ಪುನೇರಳೆ ಕಡ್ಡಿಗಳನ್ನು ಆಯ್ಕೆ ಮಾಡಿ 4 ಮೊಗ್ಗುಗಳು ಇರುವಂತೆ ಕತ್ತರಿಸಿ 3'x3' ಅಂತರದಲ್ಲಿ ನಾಟಿ ಮಾಡುವುದು | 20 ಮಾ.ದಿನ | 1 ಎಕರೆ | 2100–00 | 4840 ಗಿಡಗಳು ದರ ರೂ. 105–00 |
| 6. | ನೀರು ಕಾಲುವೆ ನಿರ್ಮಿಸುವುದು | 10 ಮಾ.ದಿನ | 1 ಎಕರೆ | 1050–00 | ದರ ರೂ. 105–00 |
| 7. | ನೀರಾವರಿ | 8 ಮಾ.ದಿನ | 1 ಎಕರೆ 1 ಬೆಳೆಗೆ | 840–00 | ದರ ರೂ. 105–00 |
| 8. | ಕೆಮ್ಮಣ್ಣು, ಕೊಟ್ಟಿಗೆ ಗೊಬ್ಬರ ಹಾಕುವುದು (ಜೈವಿಕ ಗೊಬ್ಬರ ಬೆರಸಿ) | 7 ಮಾ.ದಿನ | 1 ಎಕರೆ | 735–00 | 10 ಟನ್ ದರ ರೂ. 105–00 |
| 9. | ರಸಾಯನಿಕ ಗೊಬ್ಬರ ಹಾಕುವುದು (ಅಮೋನಿಯಂ ಸಲ್ಫೇಟ್, ಸೂಪರ್ ಫಾಸ್ಫೇಟ್ ಮತ್ತು ಮ್ಯೂರಿಯೇಟ್ ಆಫ್ ಪೊಟ್ಯಾಷ್ ಮಿಶ್ರ ಮಾಡಿ) | 6 ಮಾ.ದಿನ | 1 ಎಕರೆ | 630–00 | ದರ ರೂ. 105–00 |
| 10. | ಕಳೆ ಕೀಳುವುದು, ಬುಡ ಸಮೇತ ಕಳೆ ಗಿಡಗಳನ್ನು ಕಿತ್ತು ಹಾಕುವುದು<br>–ಗ್ಲೈಸಲ್ ಸಿಂಪಡಿಸುವುದು | 5 ಮಾ.ದಿನ<br>2 ಮಾ.ದಿನ | 1 ಎಕರೆ<br>1 ಎಕರೆ | 525–00<br>300–00 | ದರ ರೂ. 105–00<br>ದರ ರೂ. 150–00 |
| 11. | ಕೀಟನಾಶಕ : ಬೆಳೆಸಂವರ್ಧಕ ಸಿಂಪರಣೆ | 2 ಮಾ.ದಿನ. | 1 ಎಕರೆ | 300–00 | ದರ ರೂ. 150–00 |

| ಕ್ರ. ಸಂ. | ಕೆಲಸದ ವಿವರ | ಮಾನವ ದಿನಗಳು | ಘಟಕ ಪ್ರಮಾಣ | ದರ (ರೂ.ಗಳಲ್ಲಿ) | ಷರಾ |
|---|---|---|---|---|---|
| 12. | ಕಡ್ಡಿ ಕಟಾವು ಮಾಡುವುದು<br>ಅ) ವರ್ಷಕ್ಕೆ ಒಂದು ಬಾರಿ ಕಡ್ಡಿ ಬುಡ ಕಟಾವು ಮಾಡಿ ತೋಟದಿಂದ ಹೊರಕ್ಕೆ ಸಾಗಿಸುವುದು ಮತ್ತು ಅದಕ್ಕೆ ಸಂಬಂಧಿಸಿದ ಕೆಲಸಗಳು<br>ಆ) ವರ್ಷಕ್ಕೆ ಒಂದು ಮಧ್ಯಮಾವಧಿ ಕಟಾವು ಮತ್ತು ಇತರ ಕೆಲಸಗಳು | 6 ಮಾ.ದಿನ<br><br>6 ಮಾ.ದಿನ | 1 ಎಕರೆ<br><br>1 ಎಕರೆ | 630–00<br><br>630–00 | 2 ಬೆಳೆ ಆದ ಮೇಲೆ ಒಂದು ಬುಡ ಕಟಾವು ದರ ರೂ. 105–00 |
| 13. | ಬೇರು ಸಮೇತ ಜೆಸಿಬಿ ಬಳಸಿ ಕಡ್ಡಿ ಕೀಳುವುದು ಮತ್ತು ಸಂಬಂಧಪಟ್ಟ ಇತರೆ ಕೆಲಸಗಳು | 8 ಗಂಟೆಗಳು | 1 ಎಕರೆ | 5600–00 | 15 ರಿಂದ 20 ವರ್ಷಕ್ಕೊಂದು ಬಾರಿ ಗಂಟೆಗೆ ರೂ. 700–00 |

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅನುಬಂಧ – 2**

**ರೇಷ್ಮೆ ಕೃಷಿ ಹುಳು ಸಾಕಾಣಿಕೆ ವಿಭಾಗದಲ್ಲಿ ಹುಳು ಸಾಕಣಿಕೆಯ ಕೆಲಸದ ಪ್ರಮಾಣ ಮತ್ತು ದರ ವಿಶ್ಲೇಷಣೆ**

| ಕ್ರ. ಸಂ. | ಕೆಲಸದ ವಿವರ | ಘಟಕ ಪ್ರಮಾಣ | ದರ | ಷರಾ |
|---|---|---|---|---|
| 1. | ರೇಷ್ಮೆ ಹುಳು ಸಾಕಾಣಿಕೆ ಪಿ3, ಪಿ4 ಕೃಷಿ ಕ್ಷೇತ್ರಗಳು:– ಸಾಕಾಣಿಕಾ ಮನೆಯ ಸೋಂಕು ನಿವಾರಣೆ, ಚಾಕಿ ಮಾಡುವುದು, ಚಾಕಿ ಸಾಕಾಣಿಕೆ ಬಲಿತ ಹುಳು ಸಾಕಾಣಿಕೆ, ಪ್ರತಿ ಹಂತದಲ್ಲಿ ಜ್ವರಕ್ಕೆ ಹೋಗದಿರುವ ಹುಳುಗಳು, ಅಸಮ ಹುಳುಗಳನ್ನು ಆಯ್ದು ಸೂಕ್ಷ್ಮದರ್ಶಕ ಪರೀಕ್ಷೆಗೆ ಒಳಪಡಿಸುವುದು. ಹುಳು ಹಂತಕ್ಕೆ ಸೂಕ್ತವಾದ ಚಾಕಿ ಹುಳುಗಳಿಗೆ, ಅಂದರೆ ಮೊದಲ ಎರಡು ಹಂತಗಳಿಗೆ 3, 4, ಮತ್ತು 5 ಮೃದು ಎಲೆಗಳು, 3 ಮತ್ತು 4ನೇ ಹಂತಕ್ಕೆ ಮಧ್ಯಮ ಬಲಿತ ಸೊಪ್ಪು ಹಾಗೂ 5ನೇ ಹಂತಕ್ಕೆ ಬಲಿತ ಸೊಪ್ಪು ಬಿಡಿಸಿ ತರುವುದು, ಚಾಕಿ ಹಂತದಲ್ಲಿ ಸೊಪ್ಪು ಕತ್ತರಿಸಿ ಹಾಕುವುದು, ಪ್ರೌಢ ಹುಳುಗಳಿಗೆ ಪೂರ್ಣ ಸೊಪ್ಪು ಹಾಕುವುದು, ಹಾಸಿಗೆ ಸೋಂಕು ನಿವಾರಕಗಳನ್ನು ಸಿಂಪಡಿಸುವುದು, ಹಣ್ಣಾದ ಹುಳುಗಳನ್ನು ಆರಿಸಿ ಚಂದ್ರಿಕೆ ಮೇಲೆ ಬಿಡುವುದು, ಗೂಡು ಬಿಡಿಸುವುದು, ಹಾಸಿಗೆ ಬದಲಾಯಿಸುವುದು, ಹುಳು ಮನೆಯನ್ನು ಸ್ವಚ್ಛಗೊಳಿಸುವುದು ಹಾಗೂ ಇತರೆ ಕೆಲಸಗಳು (ಒಂದು ಮೊಟ್ಟೆಯ ಪ್ರತ್ಯೇಕ ಸಾಕಾಣಿಕೆ) | 5 ಮೊಟ್ಟೆ<br>10 ಮೊಟ್ಟೆ<br>15 ಮೊಟ್ಟೆ<br>25 ಮೊಟ್ಟೆ<br>30 ಮೊಟ್ಟೆ<br>40 ಮೊಟ್ಟೆ<br>50 ಮೊಟ್ಟೆ | 630<br>1155<br>1785<br>3045<br>3570<br>4830<br>5985 | ಹುಳು ಸಾಕಾಣಿಕೆ 22–27 ದಿನಗಳು, ಸೋಂಕು ನಿವಾರಣೆ 2 ದಿನಗಳು, ಪ್ರತಿ ಬೆಳೆಗೆ 30 ದ್ವಿತಳಿ ಅಥವಾ 50 ಮೈಸೂರು ತಳಿ ಮೊಟ್ಟೆಗಳಿಗಿಂತ ಮೀರಬಾರದು. |
| 2. | ರೇಷ್ಮೆ ಹುಳು ಸಾಕಾಣಿಕೆ : ಪಿ–2 : ಕೃಷಿ ಕ್ಷೇತ್ರಗಳು : ಸಾಕಾಣಿಕೆ ಮನೆಯ ಸೋಂಕು ನಿವಾರಣೆ, ಚಾಕಿ ಮಾಡುವುದು, ಚಾಕಿ ಸಾಕಾಣಿಕೆ, ಬಲಿತ ಹುಳು ಸಾಕಾಣಿಕೆ, ಪ್ರತಿ ಹಂತದಲ್ಲಿ ಜ್ವರಕ್ಕೆ ಹೋಗದಿರುವ ಹುಳುಗಳು ಅಸಮ ಹುಳುಗಳನ್ನು ಆಯ್ದು ಸೂಕ್ಷ್ಮದರ್ಶಕ ಪರೀಕ್ಷೆಗೆ ಒಳಪಡಿಸುವುದು, ಹುಳು ಹಂತಕ್ಕೆ ಸೂಕ್ತವಾದ ಚಾಕಿ ಹುಳುಗಳಿಗೆ ಅಂದರೆ ಮೊದಲ 2 ಹಂತಗಳಿಗೆ 3,4 ಮತ್ತು 5 ಮೃದು ಎಲೆಗಳು, 3 ಮತ್ತು 4ನೇ ಹಂತಕ್ಕೆ ಬಲಿತೆ ಸೊಪ್ಪು ಬಿಡಿಸಿ ತರುವುದು. ಚಾಕಿ ಹಂತದಲ್ಲಿ ಸೊಪ್ಪು ಕತ್ತರಿಸಿ | 25 ಮೊಟ್ಟೆ<br>50 ಮೊಟ್ಟೆ<br>60 ಮೊಟ್ಟೆ<br>75 ಮೊಟ್ಟೆ | 2625<br>5250<br>6300<br>7875 | ಪ್ರತಿ ಬೆಳೆಗೆ 75 ಮೊಟ್ಟೆಗಳನ್ನು ಮೀರಬಾರದು |

| ಕ್ರ. ಸಂ. | ಕೆಲಸದ ವಿವರ | ಘಟಕ ಪ್ರಮಾಣ | ದರ | ಷರಾ |
|---|---|---|---|---|
| | ಹಾಕುವುದು. ಪ್ರೌಢ ಹುಳುಗಳಿಗೆ ಪೂರ್ಣ ಸೊಪ್ಪು ಹಾಕುವುದು, ಹಾಸಿಗೆ ಸೋಂಕು ನಿವಾರಕಗಳನ್ನು ಸಿಂಪಡಿಸಿವುದು, ಹಣ್ಣಾದ ಹುಳುಗಳನ್ನು ಆರಿಸಿ ಚಂದ್ರಿಕೆ ಮೇಲೆ ಬಿಡುವುದು, ಗೂಡು ಬಿಡಿಸುವುದು, ಹಾಸಿಗೆ ಬದಲಾಯಿಸುವುದು, ಹುಳು ಮನೆಯನ್ನು ಸ್ವಚ್ಛಗೊಳಿಸುವುದು ಹಾಗೂ ಇತರೆ ಕೆಲಸಗಳು (ಎರಡು ಮೊಟ್ಟೆಗಳ ಪ್ರತ್ಯೇಕ ಸಾಕಾಣಿಕೆ) | | | |
| 3. | ರೇಷ್ಮೆ ಹುಳು ಸಾಕಾಣಿಕೆ–ಪಿ1, ಕೃಷಿ ಕ್ಷೇತ್ರಗಳು : ಸಾಕಾಣಿಕೆ ಮನೆಯ ಸೋಂಕು ನಿವಾರಣೆ, ಚಾಕಿ ಮಾಡುವುದು, ಚಾಕಿ ಚಾಕಾಣಿಕೆ, ಬಲಿತ ಹುಳು ಸಾಕಾಣಿಕೆ, ಪ್ರತಿ ಹಂತದಲ್ಲಿ ಜ್ವರಕ್ಕೆ ಹೋಗದಿರುವ ಹುಳುಗಳು, ಅಸಮ ಹುಳುಗಳನ್ನು ಆಯ್ದು ಸೂಕ್ಷ್ಮದರ್ಶಕ ಪರೀಕ್ಷೆಗೆ ಒಳಪಡಿಸುವುದು, ಹುಳು ಹಂತಕ್ಕೆ ಸೂಕ್ತವಾದ ಚಾಕಿ ಹುಳುಗಳಿಗೆ ಅಂದರೆ ಮೊದಲ 2 ಹಂತಗಳಿಗೆ 3, 4, ಮತ್ತು 5 ಮೃದು ಎಲೆಗಳು, 3 ಮತ್ತು 4ನೇ ಹಂತಕ್ಕೆ ಮಧ್ಯಮ ಬಲಿತ ಸೊಪ್ಪು ಹಾಗೂ 5ನೇ ಹಂತಕ್ಕೆ ಬಲಿತ ಸೊಪ್ಪು ಬಿಡಿಸಿ ತುರುವುದು. ಚಾಕಿ ಹಂತದಲ್ಲಿ ಸೊಪ್ಪು ಕತ್ತರಿಸಿ ಹಾಕುವುದು, ಪ್ರೌಢ ಹುಳುಗಳಿಗೆ ಪೂರ್ಣ ಸೊಪ್ಪು ಹಾಕುವುದು. ಹಾಸಿಗೆ ಸೋಂಕು ನಿವಾರಕಗಳನ್ನು ಸಿಂಪಡಿಸುವುದು ಹಣ್ಣಾದ ಹುಳುಗಳನ್ನು ಆರಿಸಿ ಚಂದ್ರಿಕೆ ಮೇಲೆ ಬಿಡುವುದು, ಗೂಡು ಬಿಡಿಸುವುದು, ಹಾಸಿಗೆ ಬದಲಾಯಿಸುವುದು, ಹುಳುಮನೆಯನ್ನು ಸ್ವಚ್ಛಗೊಳಿಸುವುದು ಹಾಗೂ ಇತರೆ ಕೆಲಸಗಳು (ಸಾಮೂಹಿಕ ಸಾಕಾಣಿಕೆ) | 25 ಮೊಟ್ಟೆ<br>50 ಮೊಟ್ಟೆ<br>60 ಮೊಟ್ಟೆ<br>75 ಮೊಟ್ಟೆ<br>80 ಮೊಟ್ಟೆ<br>100 ಮೊಟ್ಟೆ | 2625<br>5250<br>6300<br>7875<br>8400<br>10500 | ಪ್ರತಿ ಬೆಳೆಗೆ 100 ರೇಷ್ಮೆ ಮೊಟ್ಟೆಗಳನ್ನು ಮೀರಬಾರದು. |

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಅನುಬಂಧ – 3**

**ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿಗಳಲ್ಲಿ ಕೆಲಸ ಪ್ರಮಾಣ ಮತ್ತು ದರ ವಿಶ್ಲೇಷಣೆಯ ವಿವರಗಳು**

| ಕ್ರ. ಸಂ. | ಕೆಲಸದ ವಿವರ | ಘಟಕ ಪ್ರಮಾಣ | ದರ (ರೂ.) | ಷರಾ (ರೂ) |
|---|---|---|---|---|
| I | **ಬಿತ್ತನೆ ಕೊಠಡಿಗಳಲ್ಲಿ ಮೊಟ್ಟೆ ತಯಾರಿಕೆ:** | | | |
| | 1. ಸೋಂಕು ನಿವಾರಣೆ : ಕಟ್ಟಡಗಳಿಗೆ ಸೋಂಕು ನಿವಾರಣೆಗೆ ಬೇಕಾದ ದ್ರಾವಕ ತಯಾರಿಸುವುದು. ಕಟ್ಟಡ ಸ್ವಚ್ಛಗೊಳಿಸುವುದು, ಹಾಗೂ ದ್ರಾವಕ ಸಿಂಪಡಿಸುವುದು, ಸಲಕರಣೆಗಳಾದ ತಟ್ಟೆ ಹಾಗೂ ಸೆಲ್ಯೂಲ್ಸ್ (ಕುಪ್ಪಿ)ಗಳ ಸ್ವಚ್ಛಗೊಳಿಸುವಿಕೆ ಹಾಗೂ ಸೋಂಕು ನಿವಾರಣೆ; | 1000 ಚ ಅ.ಗಳ ವಿಸ್ತೀರ್ಣ<br>35 ತಟ್ಟೆ<br>2500 ಕುಪ್ಪಿ | 150<br><br>150 | 300–00<br><br>300–00 |
| | 2. ಬಿತ್ತನೆ ಗೂಡುಗಳನ್ನು ಪ್ರತ್ಯೇಕಿಸುವಿಕೆ : ಜೆಲ್ಲಿ, ಕರಗಿದ ಹಾಗೂ ಇತರೆ ಕಳಪೆ ಗೂಡುಗಳನ್ನು ಪ್ರತ್ಯೇಕಿಸಿ, ಏಕ ಪದರದಲ್ಲಿ ಹರಡುವುದು (ಒಂದು ತಟ್ಟೆಯಲ್ಲಿ 1500 ಮೈಸೂರು ತಳಿ ಅಥವಾ 1000 ದ್ವತಳಿ ಬಿತ್ತನೆ ಗೂಡು) ಹಾಗೂ ಲಿಂಗ ವಿಭಜನೆ (ದ್ವಿತಳಿ ಮೊಟ್ಟೆ ತಯಾರಿಕೆಯಲ್ಲಿ ಗೂಡುಗಳ ತುದಿಯನ್ನು ಕತ್ತರಿಸಿ ಚಿಟ್ಟೆ ಹೊರಬರಲು ಅನುಕೂಲ ಮಾಡುವುದು) 3 ಚಿಟ್ಟೆ ಆರಿಸುವುದು, ಪೇರಿಂಗ್, ಡಿಪೇರಿಂಗ್, ಮೊಟ್ಟೆ ಹಾಳೆಗಳ ಮೇಲೆ ಸೆಲ್ಯೂಲ್ಸ್‌ಗಳನ್ನು ಜೋಡಿಸುವುದು ಹಾಗೂ ಸಂಬಂಧಿಸಿದ ಕೆಲಸಗಳು. | 8000 ಮೈಸೂರು ತಳಿ ಗೂಡುಗಳು<br>5000 ದ್ವಿತಳಿ ಗೂಡುಗಳಿಗೆ<br><br>3500 ಜೊತೆಗಳು | 150<br><br><br>150 | 300–00<br><br><br>450–00 |

| ಕ್ರ. ಸಂ. | ಕೆಲಸದ ವಿವರ | ಘಟಕ ಪ್ರಮಾಣ | ದರ (ರೂ.) | ಷರಾ (ರೂ) |
|---|---|---|---|---|
| II | **ಪ್ಯೂಪ ಪರೀಕ್ಷೆ (ವಿಜ್ಞಾನ ಜ್ಞಾನವುಳ್ಳವರಾಗಿರಬೇಕು) :** ಕಳಪೆ ಗೂಡು ಹಾಗೂ ಉತ್ತಮ ಗೂಡುಗಳನ್ನು ಆರಿಸಿ ಗೂಡುಗಳನ್ನು ಕತ್ತರಿಸಿ ಪ್ಯೂಪ ಹೊರತೆಗೆದು 10 ರಿಂದ 20 ಪ್ಯೂಪಾಗಳನ್ನು ಕುಪ್ಪೆಯಲ್ಲಿ ಅರೆದು ರಸವನ್ನು 1 ಗ್ಲಾಸ್ ಸ್ಲೈಡ್ ಮೇಲೆ 5 ಸ್ಮಿಯರ್‌ಗಳನ್ನು ತೆಗೆದು ಕವರ್ ಸ್ಲಿಪ್ ನಿಂದ ಮುಚ್ಚಿ ಸೂಕ್ಷ್ಮದರ್ಶಕದಲ್ಲಿ ಪರೀಕ್ಷೆ ಮಾಡುವುದು, ಸಲಕರಣೆ ಮತ್ತು ಅರೆದ ವಸ್ತುಗಳನ್ನು ಸ್ವಚ್ಛ ಮಾಡುವುದು. | 200 ಸ್ಮೀಯರ್ಸ್ | 150 | 300–00 |
| III | **ಚಿಟ್ಟೆ ಪರೀಕ್ಷೆ :** 1. ಮಿಶ್ರತಳಿ ಮೊಟ್ಟೆ ತಯಾರಿಕೆಗೆ (ಶೇ 20 ರಷ್ಟು ಸಾಮೂಹಿಕ ಚಿಟ್ಟೆ ಪರೀಕ್ಷೆ) ಮೊಟ್ಟೆ ಇಟ್ಟ ನಂತರ ತಾಯಿ ಚಿಟ್ಟೆಗಳ ಮಾದರಿಯನ್ನು ಆಯ್ಕೆ ಮಾಡಿ ಕುಪ್ಪಿಯಲ್ಲಿ ಅಥವಾ ಮಿಕ್ಸಿಯಲ್ಲಿ ಪೊಟ್ಯಾಷಿಯಂ ಕಾರ್ಬೋನೇಟ್ ರಾಸಾಯನಿಕ ಸೇರಿಸಿ ಅರೆಯುವುದು, ಅರೆದ ನಂತರ ಸೋಸಿ ರಸವನ್ನು 1 ಗ್ಲಾಸ್ ಸ್ಲೈಡ್ ಮೇಲೆ 5 ಸ್ಮೀಯರ್‌ಗಳನ್ನು ತೆಗೆದು ಕವರ್ ಸ್ಲಿಪ್‌ನಿಂದ ಮುಚ್ಚಿ ಸೂಕ್ಷ್ಮದರ್ಶಕದಲ್ಲಿ ಪರೀಕ್ಷೆ ಮಾಡುವುದು, ಸಲಕರಣೆ ಮತ್ತು ಅರೆದ ವಸ್ತುಗಳನ್ನು ಸ್ವಚ್ಛ ಮಾಡುವುದು. | 200 ಸ್ಮೀಯರ್ಸ್ | 150 | 300–00 |
| | 2) ಶುದ್ಧ ತಳಿ ಮೊಟ್ಟೆ ತಯಾರಿಕೆಗೆ : (ಶೇ 100 ಪ್ರತ್ಯೇಕ ಚಿಟ್ಟೆ ಪರೀಕ್ಷೆ) ಪ್ರತಿ ತಾಯಿ ಚಿಟ್ಟೆಯನ್ನು ಪ್ರತ್ಯೇಕವಾಗಿ ಪೊಟ್ಯಾಷಿಯಂ ಕಾರ್ಬೋನೇಟ್ ರಾಸಾಯನಿಕ ಸೇರಿಸಿ ಅರೆಯುವುದು. ಅರೆದ ನಂತರ ರಸವನ್ನು 1 ಗ್ಲಾಸ್ ಸ್ಲೈಡ್ ಮೇಲೆ 5 ಸ್ಮಿಯರ್ಸ್‌ಗಳನ್ನು ತೆಗೆದು ಕವರ್ ಸ್ಲಿಪ್‌ನಿಂದ ಮುಚ್ಚಿ ಸೂಕ್ಷ್ಮದರ್ಶಕದಲ್ಲಿ ಪರೀಕ್ಷೆ ಮಾಡುವುದು.<br>ಅ) ಮೊಟ್ಟೆ ಹಾಳೆಗಳ ಸೋಂಕು ನಿವಾರಣೆ<br>ಆ) ಬಿಡಿ ಮೊಟ್ಟೆಗಳ ಸೋಂಕು ನಿವಾರಣೆ | 200 ಸ್ಮಿಯರ್ಸ್ | 150–00 | 300–00 |
| IV | ಆಮ್ಲೋಪಚಾರ – ಮೊಟ್ಟೆ ಹಾಳೆಗೆ ಹಾಗೂ ಚಾಕಿ ಮೊಟ್ಟೆಗಳಿಗೆ, ಮೊಟ್ಟೆಗಳನ್ನು ಆಮ್ಲಾಂಶ ಹೋಗುವ ತನಕ ಹರಿಯುವ ನೀರಿನಲ್ಲಿ ತೊಳೆದು ನೆರಳಿನಲ್ಲಿ ಒಣಗಿಸಿ ಶೇಖರಿಸುವುದು. | 400 ಹಾಳೆಗಳು ಅಥವಾ 2 ಕೆ.ಜಿ. ಬಿಡಿ ಮೊಟ್ಟೆಗಳು | 150–00 | 300–00 |
| V | **ಶೈತ್ಯಾಗಾರ ನಿರ್ವಹಣೆ :**<br>1) ಎಲೆಕ್ಟ್ರಿಕಲ್ ಅಥವಾ ಮೆಕ್ಯಾನಿಕಲ್ ಅಥವಾ ರೆಫ್ರಿಜಿರೇಷನ್‌ನಲ್ಲಿ ಡಿಪ್ಲೊಮೊ ಪಡೆದಿರಬೇಕು. ಶೈತ್ಯಾಗಾರದ ಮತ್ತು ಸಿಬ್ಬಂದಿ ವರ್ಗದ ಮೇಲ್ವಿಚಾರಣೆ | – | 200–00 | 200–00 |
| | 2) ಎಲೆಕ್ಟ್ರಿಕಲ್ ಅಥವಾ ಮೆಕ್ಯಾನಿಕಲ್ ಐ.ಟಿ.ಐ. ಸರ್ಟಿಫಿಕೇಟ್ ಹೊಂದಿರಬೇಕು. ಶೈತ್ಯಾಗಾರದ ಸಾಮಾನ್ಯ ನಿರ್ವಹಣೆ ಮತ್ತು ದಿನನಿತ್ಯ ಯಂತ್ರಗಳನ್ನು ಶುಚಿಗೊಳಿಸುವುದು. | – | 150–00 | 150–00 |
| | 3) ವೈರ್‌ಮೆನ್ ಸರ್ಟಿಫಿಕೇಟ್ ಹೊಂದಿರಬೇಕು. ಸ್ವಿಚ್‌ಗೇರ್ ರೂಮಿನ ಮೇಲ್ವಿಚಾರಣೆ ಮತ್ತು 100 ಕೆ.ವಿ.ಎ . ಟ್ರಾನ್ಸ್‌ಫಾರಂನ ಸಂಪೂರ್ಣ ನಿರ್ವಹಣೆ. | – | 150–00 | 150–00 |
| | 4) ಶೈತ್ಯಾಗಾರದ ಸಂಪೂರ್ಣ ಶುಚಿತ್ವ ಮಾಡುವುದು ಹಾಗೂ ಇತರೆ ಕೆಲಸಗಳು | – | 150–00 | 150–00 |

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಅನುಬಂಧ – 4

### ರೇಷ್ಮೆ ಗೂಡಿನ ಮಾರುಕಟ್ಟೆಗಳಲ್ಲಿ ನಿರ್ವಹಿಸುವ ಕೆಲಸದ ಪ್ರಮಾಣ ಮತ್ತು ದರ ವಿಶ್ಲೇಷಣೆಯ ವಿವರ

| ಕ್ರ. ಸಂ. | ಕೆಲಸದ ವಿವರ | ಘಟಕ ಪ್ರಮಾಣ | ದರ | ಷರಾ |
|---|---|---|---|---|
| 1. | ಮಾರುಕಟ್ಟೆಯ ಕೆಲಸ ಹರಾಜು ಚೀಟಿ ಬರೆಯುವುದು, ಡಿ.ಟಿ.ಆರ್. ನಿರ್ವಹಣೆ, ರೇಷ್ಮೆ ಗೂಡು ಗುಣಮಟ್ಟ ಪರೀಕ್ಷಿಸುವುದು, ಮಾರುಕಟ್ಟೆ ಸಹಾಯಕರಾಗಿ ಕೆಲಸ ನಿರ್ವಹಿಸುವುದು. | 1 ದಿನಕ್ಕೆ | 150–00 | –– |
| 2. | ಮಾರುಕಟ್ಟೆ ಶುಚಿತ್ವ (ಮೊದಲನೆ ದರ್ಜೆ ಘಟಕಕ್ಕೆ) | 1 ದಿನಕ್ಕೆ | 105–00 | ಪ್ರತಿ ಘಟಕಕ್ಕೆ |
| 3. | ಮಾರುಕಟ್ಟೆ ಶುಚುತ್ವಕ್ಕೆ ಸಂಬಂಧಪಟ್ಟ ಎಲ್ಲಾ ಕೆಲಸ ಕಾರ್ಯಗಳಿಗೆ – ಸಾಮಾನ್ಯ ದರ್ಜೆ | 1 ದಿನಕ್ಕೆ | 105–00 | ಪ್ರತಿ ಘಟಕಕ್ಕೆ |
| 4. | ಶೌಚಾಲಯ ಶುಚಿತ್ವ | 1 ದಿನಕ್ಕೆ | 105–00 | ಪ್ರತಿ ಘಟಕಕ್ಕೆ |

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಅನುಬಂಧ – 5

### ರೀಲಿಂಗ್ ತಾಂತ್ರಿಕ ಸೇವಾ ಕೇಂದ್ರಗಳ ಕೆಲಸದ ಪ್ರಮಾಣ ಮತ್ತು ದರ ವಿಶ್ಲೇಷಣೆಯ ವಿವರ

| ಕ್ರ. ಸಂ. | ಕೆಲಸದ ವಿವರ | ಘಟಕ ಪ್ರಮಾಣ | ದರ | ಷರಾ |
|---|---|---|---|---|
| 1. | ರೀಲಿಂಗ್ ತಾಂತ್ರಿಕ ಸೇವಾ ಕೇಂದ್ರದ ಕೆಲಸದ ವಿವರ : (1) ವೈಂಡಿಂಗ್, ರೀವೈಂಡಿಂಗ್, ಕಿಲ್ ಚಾ ಮಾಡುವುದು, ಹಾಗೂ ಇತರೆ ಕೆಲಸಗಳು | ಒಂದು ಮಾದರಿಗೆ ರೂ. 30–00 ರಂತೆ 5 ಮಾದರಿಗಳು | 150–00 | |

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಅನುಬಂಧ – 6

### ನೂಲು ಬಿಚ್ಚಾಣಿಕೆ ಕಿರು ಘಟಕಗಳು, ತರಬೇತಿ ಮತ್ತು ರೇಷ್ಮೆ ನೂಲು ಉತ್ಪಾದನಾ ಕೇಂದ್ರಗಳು, ನೂಲು ಬಿಚ್ಚಾಣಿಕೆ ಸಂಕೀರ್ಣಗಳಲ್ಲಿ ಕೆಲಸದ ಪ್ರಮಾಣ ಹಾಗೂ ದರ ವಿಶ್ಲೇಷಣೆ.

| ಕ್ರ. ಸಂ. | ಕೆಲಸದ ವಿವರ | ಘಟಕ ಪ್ರಮಾಣ | ದರ | ಷರಾ |
|---|---|---|---|---|
| 1. | ನೂಲು ಬಿಚ್ಚಾಣಿಕೆಯ ಕೆಲಸ : | 1 ಕೆ.ಜಿ. ಕಚ್ಚಾ ರೇಷ್ಮೆ ಉತ್ಪಾದಿಸಲು | 105–00 | ಪ್ರತಿ ಮಾನವ ದಿನಕ್ಕೆ ರೂ. 105–00 |
| | 1) ಗೂಡು ವಿಂಗಡಿಸುವುದು | | 105–00 | |
| | 2) ಗೂಡು ಬೇಯಿಸುವುದು | | 315–00 | ಪ್ರತಿ ಮಾನವ ದಿನಕ್ಕೆ ರೂ. 105–00 |
| | 3) ರೀಲಿಂಗ್, ರೀ–ರೀಲಿಂಗ್ | | 105–00 | |
| | 4) ರೇಷ್ಮೆ ಸ್ವಚ್ಛ ಮಾಡುವುದು, ರೇಷ್ಮೆ ನಟ್ಟಿಯನ್ನು ಸ್ವಚ್ಛ ಮಾಡುವುದು, (ಲೇಸಿಂಗ್ ಮತ್ತು ಪ್ಯಾಕಿಂಗ್ ಸೇರಿ) | | | |
| 2. | ಬೆಲೆ ನಿರ್ವಹಣೆ ಹಾಗೂ ಇತರೆ ಕೆಲಸಗಳು | | 105–00 | |

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಅನುಬಂಧ – 7

### ರೇಷ್ಮೆ ಇಲಾಖೆಯ ತಾಂತ್ರಿಕ ಕೆಲಸ ಕಾರ್ಯಗಳ ನಿರ್ವಹಣೆಗೆ ಬೇಕಾದ ಕೆಲಸದ ಪ್ರಮಾಣದ ಮತ್ತು ದರ ವಿಶ್ಲೇಷಣೆಯ ವಿವರ

| ಕ್ರ. ಸಂ. | ಕೆಲಸದ ವಿವರ | ಘಟಕ ಪ್ರಮಾಣ | ದರ (ರೂ) | ಷರಾ |
|---|---|---|---|---|
| 1. | ವಾಹನ ಚಾಲನೆ | 1 ದಿನಕ್ಕೆ | 150–00 | |
| 2. | ಕಛೇರಿ ಕೆಲಸ : ಬೆರಳಚ್ಚು | 1 ದಿನಕ್ಕೆ | 150–00 | |
| 3. | ಕಾವಲು ಕೆಲಸ | 1 ದಿನಕ್ಕೆ | 100–00 | |

| ಕ್ರ. ಸಂ. | ಕೆಲಸದ ವಿವರ | ಘಟಕ ಪ್ರಮಾಣ | ದರ (ರೂ) | ಷರಾ |
|---|---|---|---|---|
| 4. | ಸೋಂಕು ನಿವಾರಣಾ ಕಾರ್ಯಕ್ಕಾಗಿ ಖಾಸಗಿ ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ನೇಮಿಸುವುದು, (ವಾಹನ ಇಂಧನ, ಮತ್ತು ಸಿಬ್ಬಂದಿ ವೆಚ್ಚ ಸೇರಿ) | 1 ದಿನಕ್ಕೆ (40 ಮನೆಗಳು) | 1500–00 | |
| 5. | ವಲಯಾಧಿಕಾರಿಗಳು ಅಥವಾ ಇತರೆ ಅಧಿಕಾರಿಗಳು ರೇಷ್ಮೆ ಬೆಳೆಗಾರರಿಂದ ಪಡೆದು ತಂದ ವಿವಿಧ ಹಂತಗಳಿಗೆ ಹುಳುಗಳನ್ನು ಸೂಕ್ಷ್ಮದರ್ಶಕ ಪರೀಕ್ಷೆಗೆ ಒಳಪಡಿಸುವುದು. ಪ್ರತಿ ಬೆಳೆಗಾರನ ಹುಳುಗಳ ಐದು ಮಾದರಿಗಳನ್ನು (ಸ್ಮೀಯರ್ಸ್) ತಯಾರಿಸಿ ಪರೀಕ್ಷಿಸುವುದು. | 20 ಬೆಳೆಗಳ ಹುಳುಗಳು | 150–00 | |

**ಭಾರತಿ ಆರ್. ನಾಯಕ್**

ಪಿ.ಆರ್. 1957 ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ತಿದ್ದೋಲೆ**

**ಸಂಖ್ಯೆ: ಸಿಆಸುಇ 193 ಸಅಸೇ 2009, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2009**

ಶ್ರೀ ಟಿ.ಆರ್. ಜಯರಾಮೇಗೌಡ, ಹಿಂದಿನ ಮುಖ್ಯ ಮಂತ್ರಿಯವರ ಸಂಸದೀಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಇವರ ಗುತ್ತಿಗೆ ಆಧಾರದ ನೇಮಕಾತಿಯ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಿ ಹೊರಡಿಸಲಾದ ಆದೇಶ ಸಂ. ಸಿಆಸುಇ 101 ಸಅಸೇ 2007, ದಿನಾಂಕ: 10.07.2007ರ ಆದೇಶದ ಅನುಬಂಧದ ಕಂಡಿಕೆ 6ನ್ನು ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

**ಭವಿಷ್ಯ ನಿಧಿ ವಂತಿಗೆ:** ಶ್ರೀ ಟಿ.ಆರ್. ಜಯರಾಮೇಗೌಡ ಇವರಿಗೆ ಮೂಲ ವೇತನ ಮತ್ತು ತುಟ್ಟಿ ಭತ್ಯೆಯ ಶೇ. 12 ರಷ್ಟು ಭವಿಷ್ಯ ನಿಧಿ ವಂತಿಗೆ ಮತ್ತು ಶೇ. 12 ರಷ್ಟು ಸರ್ಕಾರದ ವತಿಯಿಂದ ಪಾವತಿಸುವುದು ಮತ್ತು ಇವರ ಮೂಲ ವೇತನದ ಶೇ. 12 ಹಾಗೂ ತುಟ್ಟಿ ಭತ್ಯೆ ಶೇ. 12 ರಷ್ಟನ್ನು ಭವಿಷ್ಯ ನಿಧಿ ವಂತಿಗೆಯಾಗಿ ಪ್ರತ ತಿಂಗಳಿನ ಸಂಬಳದಲ್ಲಿ ಕಟಾಯಿಸಿ ಮೈಸೂರು ಪೇಪರ್ ಮಿಲ್ಸ್ ಉದ್ಯೋಗಿಗಳ ಭವಿಷ್ಯ ನಿಧಿಗೆ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1948 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## EDUCATION SECRETARIAT

**Sub:** Starting of new Government Polytechnic College at Chitapur, Gulbarga District.

**Ref:** Note No. MUMAKA 1719/2008 dated 07.07.2009

During the visit of the Hon'ble Chief Minister on 05.06.2009 to Chitapur Town in Gulbarga District, the local citizens by explaining the need to establish a Government Polytechnic in Chitapur requested the Hon'ble Chief Minister to secure approval of the Government for establishment of a new Government Polytechnic to be started from the academic year 2009-10.

The matter has been examined in detail and in consultation with the Director of Technical Education, besides considering the need and the request of the people of Chitapur and in the interest of student community, the Government is pleased to pass the following :

**Order No. ED 191 YOYOKA 2009, Bangalore, Dated: 17th July 2009**

Approval is hereby accorded for starting of a new Government Polytechnic College in Chitapur, Gulbarga District, from the academic year 2009-10.

2. In the new Polytechnic, approval is also accorded for commencement of the following courses with the intake as under :

| | Course | Intake |
|---|---|---|
| 1. | Electronics and Communication | 60 |
| 2. | Mechanical Engineering | 60 |
| 3. | Civil Engineering | 60 |
| 4. | Computer Science | 60 |

3. The terms and conditions for commencement of Polytechnic Colleges and the required staff, furniture, expenditure debitable etc., would be as in the Government Order of even number dated 29.06.2009.

By Order and in the name of the Governor of Karnataka,

P.R. 1949

**S.M. NANDA KUMAR**

Under Secretary to Government, Education Department (Planning)

**ಒಳಾಡಳಿತ ಸಚಿವಾಲಯ**

**ವಿಷಯ:** ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯದ ಆವರಣದಲ್ಲಿ ಬಿ.ಎಸ್.ಸಿ. (ಕೃಷಿ) ವಿದ್ಯಾರ್ಥಿಯಾದ ಶ್ರೀ ಜೆ.ಕೆ. ರಮೇಶ್ ರವರು ದಿನಾಂಕ: 1.7.09 ರಂದು ಆತ್ಮಹತ್ಯೆ ಮಾಡಿರುವ ಪ್ರಕರಣವನ್ನು ಸಿ.ಐ.ಡಿ. ತನಿಖೆಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಟಿಪ್ಪಣಿ ಸಂ. ಮುಮಕಾ/2480/2480/2009 ದಿನಾಂಕ: 28.07.2009.

**ಪ್ರಸ್ತಾವನೆ:**

ಮೇಲೆ ಓದಲಾದ ಟಿಪ್ಪಣಿಯಲ್ಲಿ ದಿನಾಂಕ: 1.7.2009 ರಂದು ಬೆಂಗಳೂರು ಕೃಷಿ ವಿಶ್ವವಿದ್ಯಾಲಯ ಆವರಣದಲ್ಲಿರುವ ವಿದ್ಯಾರ್ಥಿ ನಿಲಯದಲ್ಲಿ ಬಿ.ಎಸ್.ಸಿ. (ಕೃಷಿ) 3ನೇ ಸೆಮಿಸ್ಟರಿನಲ್ಲಿ ಓದುತ್ತಿದ್ದ ವಿದ್ಯಾರ್ಥಿಯಾದ ಶ್ರೀ ಜೆ.ಕೆ. ರಮೇಶ್ ರವರು ಮರಣ ಪತ್ರ ಬರೆದಿಟ್ಟು ಆತ್ಮಹತ್ಯೆ ಮಾಡಿಕೊಂಡಿರುವ ಬಗ್ಗೆ ಮೃತರ ತಂದೆಯವರಾದ ಶ್ರೀ ಜಮದಾಡಪ್ಪ ಇವರು ದೂರು ನೀಡಿದ್ದು, ತಮಗೆ ನ್ಯಾಯ ದೊರಕಿಸಿಕೊಡಬೇಕೆಂದು ಕೋರಿರುತ್ತಾರೆ. ಈ ವಿಷಯದಲ್ಲಿ ದಲಿತ ಸಂಘರ್ಷ ಸಮಿತಿ (ಸಂಯೋಜಕ) ರಾಜ್ಯ ಸಮಿತಿ, ಬೆಂಗಳೂರು, ಇವರು ಸಹ ಮನವಿಯನ್ನು ಸಲ್ಲಿಸಿ ಈ ಆತ್ಮಹತ್ಯೆ ಪ್ರಕರಣವನ್ನು ಸಿ.ಐ.ಡಿ. ತನಿಖೆ ಆದೇಶಿಸಲು ಕೋರಿರುತ್ತಾರೆ.

ಆದುದರಿಂದ ಈ ಆದೇಶ.

**ಆದೇಶ ಸಂ. ಒಇ 98, ಸಿಐಡಿ ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2009**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದಿನಾಂಕ: 1.7.2009 ರಂದು ಬೆಂಗಳೂರು ಕೃಷಿ ವಿಶ್ವವಿದ್ಯಾಲಯ ಆವರಣದಲ್ಲಿರುವ ವಿದ್ಯಾರ್ಥಿ ನಿಲಯದಲ್ಲಿ ಬಿ.ಎಸ್.ಸಿ. (ಕೃಷಿ) 3ನೇ ಸೆಮಿಸ್ಟರಿನಲ್ಲಿ ಓದುತ್ತಿದ್ದ ವಿದ್ಯಾರ್ಥಿಯಾದ ಶ್ರೀ ಜೆ.ಕೆ. ರಮೇಶ್ ರವರು ಮರಣ ಪತ್ರ ಬರೆದಿಟ್ಟು ಆತ್ಮಹತ್ಯೆ ಮಾಡಿಕೊಂಡಿರುವ ಪ್ರಕರಣದ ಸತ್ಯಾಸತ್ಯತೆಗಳನ್ನು ತಿಳಿಯುವ ಸಲುವಾಗಿ ಈ ಪ್ರಕರಣವನ್ನು ಸಿ.ಐ.ಡಿ. ತನಿಖೆಗೆ ಒಳಪಡಿಸಲು ಆದೇಶಿಸಿದೆ.

ಸಿ.ಐ.ಡಿ. ತನಿಖೆಗೆ ಬೆಂಗಳೂರಿನ ಕೃಷಿ ವಿಶ್ವವಿದ್ಯಾಲಯದ ಅಧಿಕಾರಿಗಳು ಸಂಪೂರ್ಣ ಸಹಕಾರ ನೀಡುವುದು.

ಸಿ.ಐ.ಡಿ. ತಂಡವು ಈ ಪ್ರಕರಣದ ಬಗ್ಗೆ ತನಿಖೆ ನಡೆಸಿ ಆದಷ್ಟು ಶೀಘ್ರವಾಗಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1961

**ಪಿ. ಶಿವರಾಮ ಭಟ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಅಪರಾಧಗಳು)

**FOREST, ECOLOGY AND ENVIRONMENT SECRETARIAT**

**Sub:** Reconstitution of Advisory Committee under Bio-Medical Waste (Management and Handling) Rules, 1998 – Orders.

**Read:**
1. Govt. Order No. FEE 126 ENV 98, Dt. 23.04.1999
2. Govt. Order No. FEE 126 ENV 98, Dt. 23.02-2000
3. Govt. Order No. FEE 126 ENV 98, Dt. 25.08.2000
4. Govt. Order No. FEE 126 ENV 98 P-3) Dt. 25.07.2002
5. Govt. Order No. FEE 126 ENV 98 ( P-3) Dt. 02.11.2007
6. Proceedings of the Advisory Committee held on 20.02.2009

**Preamble:**

The Ministry of Environment and Forests, Govt. of India have issued the Bio-Medical Waste (Management and Handling) Rules, 1998 in Notification No. S.O. 630 – (E), dt. 20-07-1998. In terms of Rule 9 of the said Rules, the State Government constituted, inter-alia, an Advisory Committee in Govt. order read at (1) above consisting of members as indicated therein. Non-official members have been included in the said Advisory Committee in Govt. Order read at (2) above. The task of enforcement of the

provisions of the Bio-Medical Waste (Management and Handling) Rules, 1998 has been assigned to the Karnataka State Pollution Control Board in Govt. Order read at (3) above. This order also cancelled the prescribed Authority constituted in G.O. read at (1) above. In Govt. order read at (4) above, the Advisory Committee was reconstituted. By way of slight modification of the earlier orders Government again reconstituted the Advisory Committee in the above Govt. order read at (5) above. It has been decided in the advisory committee meeting held on 20-02-2009 to include the Chairman, Karnataka Veterinary Association also as a Member of Advisory Committee as all the Private Hospitals/Clinics and practicing Veterinarians would be represented. After careful examination, it has been deicded to consider the recommendation of the Adivsory committee, to include the Chairman, Karnataka Veterinary Association and the Chairman, Bangalore Water Supply and Sewage Board, as a members of the Advisory Committee under Bio-Medical Waste (Management and Handling) Rules, 1998 hence this order.

**Government Order No. FEE 22 EPC 2009, Bangalore, Dated: 17th August 2009**

In view of the circumstances explained in the preamble the Government are pleased to include the Chairman, Karnataka Veterinary Association and the Chairman, Bangalore Water Supply and Sewage Board, as members of the Advisory Committee constituted under Rule (9) of Bio-Medical Waste (Management and Handling) Rules, 1998.

In addition to the members listed in the Government Order issued vide Order No. FEE 126 ENV 98 (P-3) dated 02.11.2007, subject to the terms and conditions spelt out in the said order.

By Order and in the name of Governor of Karnataka,

**N.R. JAGANMATHA**

P.R. 1964

Under Secretary to Government,

Forest, Ecology and Environment Department.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಗ್ರಾಅಪ 62 ಜಿಪಅ 2009, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2009**

ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 62 ಜಿಪಅ 2009, ದಿನಾಂಕ: 10–06–2009ರ ಆದೇಶ ಭಾಗದ ಮೊದಲನೇ ಪ್ಯಾರಾದಲ್ಲಿ ಯೋಜನಾ ವಿಭಾಗದ ಕ್ರಮ ಸಂ. (1) ರಲ್ಲಿನ **"ಸಾಗರ, ಶಿವಮೊಗ್ಗ ಜಿಲ್ಲೆ"** ಎಂಬುದನ್ನು **"ಶಿಕಾರಿಪುರ, ಶಿವಮೊಗ್ಗ ಜಿಲ್ಲೆ"** ಎಂದೂ ಮೂರನೇ ಪ್ಯಾರಾದಲ್ಲಿ ಯೋಜನಾ ಉಪ ವಿಭಾಗದ ಕ್ರಮ ಸಂಖ್ಯೆ (8) ರಲ್ಲಿನ **"ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ"** ಎಂಬುದನ್ನು **"ಕೂಡ್ಲಿಗಿ, ಬಳ್ಳಾರಿ ಜಿಲ್ಲೆ"** ಎಂದೂ ಹಾಗೂ ಕ್ರಮ ಸಂಖ್ಯೆ (11) ರಲ್ಲಿನ **"ಕೊಪ್ಪ, ಚಿಕ್ಕಮಗಳೂರು ಜಿಲ್ಲೆ"** ಎಂಬುದನ್ನು **"ನರಸಿಂಹರಾಜಪುರ, ಚಿಕ್ಕಮಗಳೂರು ಜಿಲ್ಲೆ"** ಎಂದೂ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1965

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು–ಎ)

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕೇಂದ್ರ ಸರ್ಕಾರದ 2ನೇ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳಲ್ಲಿ ಕರ್ನಾಟಕ ರಾಜ್ಯಕ್ಕೆ ಸೂಕ್ತವಾದ ಅಂಶಗಳನ್ನು ಪರಿಶೀಲಿಸಿ, ಶಿಫಾರಸ್ಸು ಮಾಡಲು ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** 1) ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿ ಸಂಖ್ಯೆ : ಸಿಎಂ/756/ಎಸ್‌ಐಪಿ/2009 ದಿನಾಂಕ: 20/04/2009.

**ಪ್ರಸ್ತಾವನೆ:**

ಮೇಲೆ ಓದಲಾದ ಮಾನ್ಯ ಮುಖ್ಯಮಂತ್ರಿಗಳ ಟಿಪ್ಪಣಿಯನ್ವಯ, ಕೇಂದ್ರ ಸರ್ಕಾರವು ನೇಮಿಸಿದ್ದ 2ನೇ ಆಡಳಿತ ಸುಧಾರಣಾ ಆಯೋಗವು ತನ್ನ ಶಿಫಾರಸ್ಸುಗಳನ್ನು ಈಗಾಗಲೇ ನೀಡಿದ್ದು, ಅವುಗಳನ್ನು ಕರ್ನಾಟಕ ರಾಜ್ಯದಲ್ಲಿ ಅನುಷ್ಠಾನಗೊಳಿಸುವ ಬಗ್ಗೆ ಕರ್ನಾಟಕ ರಾಜ್ಯಕ್ಕೆ ಸೂಕ್ತವಾದ ಅಂಶಗಳನ್ನು ಪರಿಶೀಲಿಸಿ ಶಿಫಾರಸ್ಸು ಮಾಡಲು ಒಂದು ಅಧಿಕಾರಿಗಳ ಸಮಿತಿಯನ್ನು ರಚಿಸುವಂತೆ ಸೂಚಿಸಿದ್ದಾರೆ. ಅದರಂತೆ ಸಮಿತಿಯೊಂದನ್ನು ರಚಿಸುವುದು ಅಗತ್ಯವೆಂದು ಪರಿಗಣಿಸಿ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 25 ಅಸಪ 2009, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2009**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ, ಕೇಂದ್ರ ಸರ್ಕಾರದ 2ನೇ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳಲ್ಲಿ ಕರ್ನಾಟಕ ರಾಜ್ಯಕ್ಕೆ ಸೂಕ್ತವಾದ ಅಂಶಗಳ ಅನುಷ್ಠಾನದ ಬಗ್ಗೆ ಶಿಫಾರಸ್ಸು ಮಾಡಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡಂತೆ ಸಮಿತಿಯನ್ನು ರಚಿಸಿದೆ.

1) ಸರ್ಕಾರದ ಮುಖ್ಯ ಕಾರ್ಯದರ್ಶಿಗಳು – ಅಧ್ಯಕ್ಷರು
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು – ಸದಸ್ಯರು
3) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ – ಸದಸ್ಯರು
4) ಪ್ರೊ: ರಾಜು, ಮಾನ್ಯ ಮುಖ್ಯಮಂತ್ರಿಯವರ ಆರ್ಥಿಕ ಸಲಹೆಗಾರರು – ಸದಸ್ಯರು
5) ಮಾನ್ಯ ಮುಖ್ಯಮಂತ್ರಿಯವರ ಪ್ರಧಾನ ಕಾರ್ಯದರ್ಶಿಗಳು – ಸದಸ್ಯರು
6) ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ) – ಸದಸ್ಯರು
7) ಸರ್ಕಾರದ ಪ್ರಧಾನ ಕಾರ್ಯದರ್ಶಿ ಲೋಕೋಪಯೋಗಿ ಇಲಾಖೆ – ಸದಸ್ಯರು
8) ಸರ್ಕಾರದ ಪ್ರಧಾನ ಕಾರ್ಯದರ್ಶಿ ಯೋಜನಾ ಇಲಾಖೆ – ಸದಸ್ಯರು
9) ಸರ್ಕಾರದ ಕಾಯದರ್ಶಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ – ಸದಸ್ಯರು
10) ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಿ.ಆ.ಸು.ಇ (ಆಡಳಿತ ಸುಧಾರಣೆ) – ಸಂಚಾಲಕರು

2) ಈ ಸಮಿತಿಯು ಕೇಂದ್ರ ಸರ್ಕಾರವು ನೀಡಿರುವ 2ನೇ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸುಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಕರ್ನಾಟಕ ರಾಜ್ಯಕ್ಕೆ ಅನ್ವಯವಾಗುವ ಸೂಕ್ತ ಅಂಶಗಳನ್ನು ಶಿಫಾರಸ್ಸು ಮಾಡಲು ಅದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಬಿ. ದೇವೂರ್**

ಪಿ.ಆರ್. 1989

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ)

**ವಿಷಯ:** ಕರ್ನಾಟಕ ಸರ್ಕಾರದ ಸಚಿವಾಲಯದ ಲೋಕೋಪಯೋಗಿ, ಬಂದರು, ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿನ ವಿಶೇಷಾಧಿಕಾರಿ (ಸಬಾರ್ಡ್) ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 35 ಸಸಿವಿ 2006, ದಿನಾಂಕ : 08.06.2006
2) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 41 ಸಸಿವಿ 2007, ದಿನಾಂಕ : 08.10.2007
3) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 586 ಸಅಸೇ 2008, ದಿನಾಂಕ : 11.07.2008
4) ಅನಧಿಕೃತ ಟಿಪ್ಪಣಿ ಸಂಖ್ಯೆ : ಲೋಇ 362 ಸೇಸಎ 2009, ದಿನಾಂಕ : 10.07.2009

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ಮತ್ತು (2) ರಲ್ಲಿ ಓದಲಾದ ದಿನಾಂಕ: 08.06.2006ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ, ಬಂದರು, ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಿ ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿನಾಂಕ: 11.07.2008 ರ ಸರ್ಕಾರಿ ಆದೇಶದಲ್ಲಿ ಸದರಿ ಹುದ್ದೆಯನ್ನು ದಿನಾಂಕ: 08.06.2008 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ನಬಾರ್ಡ್ ಯೋಜನೆಯಡಿ ಈಗಾಗಲೇ ಮಂಜೂರಾಗಿರುವ ಸುಮಾರು 600 ಕೋಟಿ ರೂ. ಗಳ ಕಾಮಗಾರಿಗಳಿರುವುದಲ್ಲದೇ ಪ್ರಸ್ತುತ 2009–10ನೇ ಸಾಲಿಗೆ 230.00 ಕೋಟಿ ರೂ. ಗಳ ಪ್ರಸ್ತಾವನೆಯು ಮಂಜೂರಾಗಿರುವುದರಿಂದ ಹಾಗೂ ಆಡಳಿತ ಹಿತದೃಷ್ಟಿಯಿಂದ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ದಿನಾಂಕ: 08.06.2009 ರಿಂದ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸುವಂತೆ ಕೋರಲಾಗಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 387 ಸಅಸೇ 2009, ಬೆಂಗಳೂರು, ದಿನಾಂಕ: 12ನೇ ಆಗಸ್ಟ್ 2009**

ಕರ್ನಾಟಕ ಸರ್ಕಾರದ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವಿಶೇಷಾಧಿಕಾರಿ (ನಬಾರ್ಡ್) ಹುದ್ದೆಯನ್ನು ದಿನಾಂಕ: 08.06.2009 ರಿಂದ ಮತ್ತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

ಈ ಆದೇಶವನ್ನು ಸರ್ಕಾರದ ಅದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ, 96, ದಿನಾಂಕ: 10.07.1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 1990

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು– 3)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಗುಬ್ಬಿ ತಾಲ್ಲೂಕು, ಹೆರೂರು ಗ್ರಾಮದ ರೇಷ್ಮೆ ಕೃಷಿ ಕ್ಷೇತ್ರದ ಜಾನುವಾರು ಕೊಠಡಿಯನ್ನು ವಿದ್ಯುತ್ ಮಗ್ಗಗಳ ಮಾರಾಟ ಸಹಕಾರ ಸಂಘ ನಿಯಮಿತಕ್ಕೆ ನೀಡುವ ಬಗ್ಗೆ.

**ಓದಲಾಗಿದೆ:** ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಇವರ ಪತ್ರ ಸಂಖ್ಯೆ: ಸರೇಕೃಕ್ಷೇ/ಹೆರೂರು/ಜಮೀನು/06–07, ದಿನಾಂಕ : 05.05.2009 ಹಾಗೂ 16.07.2009.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ, ಗುಬ್ಬಿ ತಾಲ್ಲೂಕು, ಹೆರೂರು ರೇಷ್ಮೆ ಕೃಷಿ ಕ್ಷೇತ್ರದಲ್ಲಿರುವ ಜಾನುವಾರು ಕೊಠಡಿಯನ್ನು ಉಪಯೋಗಿಸದೇ ಇರುವ ಪ್ರಯುಕ್ತ ತರಬೇತಿ ಕೇಂದ್ರವನ್ನು ನಡೆಸಲು ವಿದ್ಯುತ್ ಮಗ್ಗಗಳ ನೇಕಾರರ ಉತ್ಪಾದನೆ ಹಾಗೂ ಮಾರಾಟ ಸಹಕಾರ ಸಂಘ ನಿಯಮಿತ, ಸೋಮಲಾಪುರ ಇವರು ಕೋರಿರುವುದಾಗಿ ವಿದ್ಯುತ್ ಮಗ್ಗಗಳ ನೇಕಾರರ ಉತ್ಪಾದನೆ ಮತ್ತು ಮಾರಾಟ ಸಂಘ ನಿಯಮಿತ, ಸೋಮಲಾಪುರವು ಹೈಟೆಕ್ ವೀವಿಂಗ್ ಪಾರ್ಕ್‌ನ ಪ್ರಮುಖ ಅಂಶ ಸಂಸ್ಥೆಯಾಗಿದ್ದು, ಪ್ರಸ್ತುತ ಹೆರೂರು ಕೃಷಿ ಕ್ಷೇತ್ರದ ಜಾನುವಾರು ಕೊಠಡಿಯನ್ನು ಉಪಯೋಗಿಸದೇ ಇರುವುದರಿಂದ ಮಾಹೆಯಾನ ಬಾಡಿಗೆ ಆಧಾರದ ಮೇಲೆ ಈ ಅನುಪಯುಕ್ತ ಜಾನುವಾರು ಕೊಠಡಿಯನ್ನು ವಿದ್ಯುತ್ ಮಗ್ಗಗಳ ಮಾರಾಟ ಸಹಕಾರ ಸಂಘ, ಸೋಮಲಾಪುರ ಇವರಿಗೆ ಬಾಡಿಗೆ ಆಧಾರದ ಮೇಲೆ ನೀಡಬಹುದಾಗಿದೆಯಾದ್ದರಿಂದ ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

ಹೆರೂರಿನ ರೇಷ್ಮೆ ಕೃಷಿ ಕ್ಷೇತ್ರದಲ್ಲಿನ ಜಾನುವಾರು ಕೊಠಡಿಯನ್ನು ರೇಷ್ಮೆ ಇಲಾಖೆಯು ಉಪಯೋಗಿಸದೇ ಇರುವುದರಿಂದ ಈ ಅನುಪಯುಕ್ತ ಜಾನುವಾರು ಕೊಠಡಿಯನ್ನು ರೇಷ್ಮೆ ಆಯುಕ್ತರು ಕೋರಿರುವಂತೆ ಬಾಡಿಗೆ ಆಧಾರದ ಮೇಲೆ ವಿದ್ಯುತ್ ಮಗ್ಗಗಳ ಮಾರಾಟ ಸಹಕಾರ ಸಂಘಕ್ಕೆ ನೀಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂ: ವಾಕೈ 4 ರೇಯೋವಿ, 2007, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಗುಬ್ಬಿ ತಾಲ್ಲೂಕು, ಹೆರೂರು ರೇಷ್ಮೆ ಕೃಷಿ ಕ್ಷೇತ್ರದಲ್ಲಿರುವ ಜಾನುವಾರು ಕೊಠಡಿಯನ್ನು ವಿದ್ಯುತ್ ಮಗ್ಗಗಳ ನೇಕಾರರ ಉತ್ಪಾದನೆ ಹಾಗೂ ಮಾರಾಟ ಸಹಕಾರ ಸಂಘ ನಿಯಮಿತ, ಸೋಮಲಾಪುರ, ಇವರಿಗೆ ಬಾಡಿಗೆ ಆಧಾರದ ಮೇಲೆ ತಾತ್ಕಾಲಿಕವಾಗಿ ಲೋಕೋಪಯೋಗಿ ಇಲಾಖೆಯು ನಿಗದಿಪಡಿಸುವ ದರಕ್ಕೆ ನೀಡುವುದಕ್ಕೆ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1994

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಲೋಕೋಪಯೋಗಿ, ಬಂದರು, ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂ. ಮುಇಂ/ಸುಂಕದ/ರಶಾ/ಸಇ೦3/2008–09, ದಿನಾಂಕ : 18.12.2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ದಾವಣಗೆರೆ ಜಿಲ್ಲೆ, ಹಾಗೂ ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ಮುಖ್ಯ ರಸ್ತೆಗಳನ್ನು ಒಂದಕ್ಕೊಂದು ಸರಪಳಿಗಳನ್ನು ಸೇರಿಸಿ ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಒಟ್ಟು

209.60 ಕಿ.ಮೀ ಉದ್ದದ ರಸ್ತೆಯನ್ನು ರಾಜ್ಯ ಹೆದ್ದಾರಿಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರು ಪ್ರಸ್ತಾವನೆ ಸಲ್ಲಿಸಿರುತಾರೆ.

ಮೇಲ್ಕಂಡ ಹಲವು ಜಿಲ್ಲಾ ಮುಖ್ಯ ರಸ್ತೆಗಳನ್ನು ಸಂಪರ್ಕವಿರುವಂತೆ ಜೋಡಿಸಿ ಭಾರತೀಯ ರಸ್ತೆ ಮಹಾಸಭೆಯ (Indian Road Congress) ರಸ್ತೆ ಅಭಿವೃದ್ಧಿ ಕುರಿತ ಲಕ್ನೋ ಯೋಜನೆ 1981–2001ರ ಪ್ರಕಾರ ಮೂಲಭೂತ ಗುಣಧರ್ಮಗಳನ್ನು ಅನುಸರಿಸಿ ಜಿಲ್ಲಾ ಮುಖ್ಯ ರಸ್ತೆಗಳನ್ನು ರಾಜ್ಯ ಹೆದ್ದಾರಿಗಳನ್ನಾಗಿ ಮೇಲ್ದರ್ಜೆಗೇರಿಸಲು ಪ್ರಸ್ತಾಪಿಸಲಾಗಿದೆ.

| ಕ್ರ. ಸಂ. | ರಾಜ್ಯ ಹೆದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ರಾಜ್ಯ ಹೆದ್ದಾರಿಯ ಉದ್ದ (ಕಿ.ಮೀ) |
|---|---|---|
| 1. | ದಾವಣಗೆರೆ – ಹೊಳಲು ರಾಜ್ಯ ಹೆದ್ದಾರಿ ಮಾರ್ಗ : ಕಂಚಿಕೆರೆ – ಬೆಂಡಿಗೆರೆ | 71.30 |
| 2. | ಇಟಗಿಯಿಂದ – ಕಂಚಿಕೆರೆ ರಾಜ್ಯ ಹೆದ್ದಾರಿ ಮಾರ್ಗ : ಕೆಂಚಮ್ಮನಹಳ್ಳಿ – ಮೈದೂರು – ಚಿಗಟಗೇರಿ – ನಜೀರನಗರ – ಅರಸೀಕೆರೆ | 44.50 |
| 3. | ರಾಷ್ಟ್ರೀಯ ಹೆದ್ದಾರಿ – 206ರ ಕಡೂರಿನಿಂದ – ಮರವಂಜಿ – ಬೆಲಗೂರು ಮೂಲಕ ಶ್ರೀರಾಮಪುರಕ್ಕೆ ಸೇರುವ ರಾಜ್ಯ ಹೆದ್ದಾರಿ | 51.00 |
| 4. | ರಾಷ್ಟ್ರೀಯ ಹೆದ್ದಾರಿ – 206ರ ಕಡೂರಿನಿಂದ – ಹಿರೇನಲ್ಲೂರು – ಅಜ್ಜಂಪುರ – ಎರಗನಹಳ್ಳಿ ಮೂಲಕ ರಾಷ್ಟ್ರೀಯ ಹೆದ್ದಾರಿ – 13ನ್ನು ಹೊಳಲ್ಕೆರೆ ಹತ್ತಿರ ಸಂಪರ್ಕಿಸುವ ರಾಜ್ಯ ಹೆದ್ದಾರಿ | 42.80 |

ಸರ್ಕಾರವು ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 374 ಸಿಆರ್‌ಎಂ 2007, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2009**

ದಾವಣಗೆರೆ ಜಿಲ್ಲೆ ಹಾಗೂ ಚಿಕ್ಕಮಗಳೂರು ಜಿಲ್ಲೆಯ ವ್ಯಾಪ್ತಿಯಲ್ಲಿ ಹಾಯ್ದುಹೋಗುವ ಈ ಕೆಳಕಂಡ ಜಿಲ್ಲಾ ಮುಖ್ಯ ರಸ್ತೆಗಳ ಸರಪಳಿಗಳನ್ನು ರಾಜ್ಯ ಹೆದ್ದಾರಿ ಎಂದು ನಾಮಕರಣ ಮಾಡಿ ಘೋಷಿಸಿದೆ.

| ರಾಜ್ಯ ಹೆದ್ದಾರಿ ಸಂ. | ರಾಜ್ಯ ಹೆದಾರಿಗಳನ್ನಾಗಿ ಮೇಲ್ದರ್ಜೆಗೇರಿಸುವ ವಿವರ | ರಾಜ್ಯ ಹೆದ್ದಾರಿಯ ಉದ್ದ (ಕಿ.ಮೀ) |
|---|---|---|
| 150 | ದಾವಣಗೆರೆ – ಹೊಳಲು ರಾಜ್ಯ ಹೆದ್ದಾರಿ ಮಾರ್ಗ : ಕಂಚಿಕೆರೆ – ಬೆಂಡಿಗೆರೆ | 71.30 |
| 151 | ಇಟಗಿಯಿಂದ – ಕಂಚಿಕೆರೆ ರಾಜ್ಯ ಹೆದ್ದಾರಿ ಮಾರ್ಗ : ಕೆಂಚಮ್ಮನಹಳ್ಳಿ – ಮೈದೂರು – ಚಿಗಟಗೇರಿ – ನಜೀರನಗರ – ಅರಸೀಕೆರೆ | 44.50 |
| 152 | ರಾಷ್ಟ್ರೀಯ ಹೆದ್ದಾರಿ – 206 ಕಡೂರಿನಿಂದ – ಮರವಂಜಿ – ಬೆಲಗೂರು – ಮೂಲಕ ಶ್ರೀರಾಮಪುರಕ್ಕೆ ಸೇರುವ ರಾಜ್ಯ ಹೆದ್ದಾರಿ | 51.00 |
| 153 | ರಾಷ್ಟ್ರೀಯ ಹೆದ್ದಾರಿ – 206ರ ಕಡೂರಿನಿಂದ – ಹಿರೇನಲ್ಲೂರು – ಅಜ್ಜಂಪುರ – ಎರಗನಹಳ್ಳಿ ಮೂಲಕ ರಾಷ್ಟ್ರೀಯ ಹೆದ್ದಾರಿ – 13ನ್ನು ಹೊಳಲ್ಕೆರೆ ಹತ್ತಿರ ಸಂಪರ್ಕಿಸುವ ರಾಜ್ಯ ಹೆದ್ದಾರಿ. | 42.80 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೇವಿಪ್ರಸಾದ್**

ಪಿ.ಆರ್. 1993

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ)

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸಂಪರ್ಕ)

## INFRASTRUCTURE DEVELOPMENT SECRETARIAT

**Sub:** Release of GoK's Share towards Shimoga Talaguppa Gauge Conversion Project / Reg.

**Read:**
1. G.O. No.IDD 52 NSW 2007, dated 24.07.2007
2. G.O. No. IDD No. 52 NSW 2007 dated 19.09.2007
3. G.O. No. IDD 52 NSW 2007 dated 26.12.2007
4. Letter No.W. 193/GC/BNC/SMET-TLGP- dated: 09.07.2009 of Chief Engineer, (Con.,) SWR Bangalore.

**Premable:**

In the Government Order referred to at Sl. Nos (1) and (3) above Government of Karnataka has released an amount of Rs. 50.00 crore towards 50:50 cost sharing for Shimoga – Talaguppa Gauge conversion project.

2. The Chief Engineer, South Western Railways, Bangalore, in his letter read at Sl. No. (4) above, has stated that, the GoK has already deposited Rs. 50.00 crore as against Rs. 76.50 crore (50% of

balance cost i.e. 153.00 crores projected as on 1.4.02). The revised cost of the project is Rs. 220.71 crore (including the expenditure of Rs. 27.93 crore incurred by Railways prior to 1.4.2002). Thus the revised share of GoK and Railways at 50:50 ratio will be Rs. 96.39 crore each. As against the above Railway has already spent Rs. 91.26 crore till 15.06.09. Further expenditure has been incurred by railways till date. Thus railways have already exhausted their share. GoK has so far deposited only Rs. 50.00 crore leaving a balance of Rs. 46.39 crore to be deposited. He has therefore requested for immediate balance deposit of Rs.50% share of Government of Karnataka which comes to Rs. 46.39 crore as per the revised cost of Rs. 220.71 crore.

3. The proposals of Railways has been examined and it has been decided to release an amount of Rs. 26.50 crore out of the Budget of Rs.100.00 crore provided under the Head of Account "5465-01-190-3-05" (Plan) 211 investment towards cost sharing for new railway projects during 2009-10. Hence this order.

**Government Order No. IDD NSW 2007, Bangalore, Dated: 19th August 2009**

After careful examination of the request of Railways, Government is pleased to release Rs. 26.50 crore (Rupees Twenty Six Crore Fifty lakhs only) towards Shimoga-Talaguppa gauge conversion project being the part of the balance 50:50 share of Government of Karnataka.

2. The expenditure shall be met under the Head of Account "5465-01-190-3-05" (Plan) 211 investment out of the budget provision Rs. 100.00 crore towards cost sharing for new railway projects during 2009-10.

3. The Chief Executive Officer, K-RIDE is authorizsed to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

4. The Chief Executive Officer, K-RIDE, shall ensure technical and Financial Analysis of the cost of the Project with due diligence with validition of costing and utilization before further release.

5. This order is issued in accordance with the concurrence of Finance Department given vide U.O. Note No.FD.1333 Ex-1/09 dated 11.08.2009.

By Order and in the name of Governor of Karnataka,

**N. MANJULA GEETHA**

P.R. 1996

Under Secretary to Government

Infrastructure Development Department

**ಶಿಕ್ಷಣ ಸಚಿವಾಲಯ**

**ವಿಷಯ:** 2009–10ನೇ ಸಾಲಿಗೆ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಗೆ ಸಂಬಂಧಿಸಿದಂತೆ, ಮುಂದುವರಿಕೆ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಎರಡನೇ ತ್ರೈಮಾಸಿಕ ಅನುದಾನ ಬಳಸಿಕೊಳ್ಳಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಇಡಿ 76 ಯೋಯೋಕ 2009, ದಿನಾಂಕ: 28.04.2009ರ (ಇಡಿ 77 ಸ್ಕೀಮರ (ಯುನಿಕ್) 2009 ದಿನಾಂಕ: 28.04.2009

2. ಸರ್ಕಾರದ ಆದೇಶ ಸಂಖ್ಯೆ: ಇಡಿ ಯೋಯೋಕ 2009 (ಭಾಗ–4) ದಿನಾಂಕ: 28.04.2009 (ಇಡಿ 77 ಸ್ಕೀಮರ) (ಯುನಿಕ್) 2009 ದಿನಾಂಕ : 28.04.2009.

**ಪ್ರಸ್ತಾವನೆ:**

1. ಮೇಲೆ (1) ರಲ್ಲಿ ಓದಲಾದ ದಿನಾಂಕ 28.04.2009ರ ಸರ್ಕಾರದ ಆದೇಶದಲ್ಲಿ 2009–10ನೇ ಸಾಲಿಗೆ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಗೆ (ರಾಜ್ಯ ವಲಯ ಯೋಜನೆಗಳು) ಸಂಬಂಧಿಸಿದಂತೆ ಮುಂದುವರಿಕೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸಂಬಂಧಪಟ್ಟ ಇಲಾಖೆಯ ನಿರ್ದೇಶಕರಿಗೆ ಅನುಮತಿ ನೀಡಲಾಗಿದೆ.

2. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆರ್ಥಿಕ ಇಲಾಖೆ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ : 16.05.2008ರ ಆದೇಶದ ಪ್ರಕಾರ 2009–10ನೇ ಸಾಲಿನಲ್ಲಿ ಯೋಜನಾ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಒದಗಿಸಲಾದ ಅನುದಾನದಲ್ಲಿ ಮೊದಲನೇ ತ್ರೈಮಾಸಿಕ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

3. ಎರಡನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 76 ಯೋಯೋಕ 2009, (ಭಾಗ–4) ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2009**
**[ಇಡಿ : 103 : ಸ್ವೀಮರ (ಯುನಿಕ್), 2009, ದಿನಾಂಕ: 17.08.2009]**

4. 2009–10ನೇ ಸಾಲಿಗೆ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಗೆ ಸಂಬಂಧಿಸಿದಂತೆ ಎಲ್ಲಾ ಮುಂದುವರಿಕೆ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, ಅನುಬಂಧದಲ್ಲಿರುವ ಕಾರ್ಯಕ್ರಮಗಳಿಗೆ ಒದಗಿಸಲಾದ ಅನುದಾನದಲ್ಲಿ 25 ಭಾಗದಷ್ಟು ಅನುದಾನವನ್ನು ವೆಚ್ಚ ಮಾಡಲು ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ, ಬೆಂಗಳೂರು, ಇವರಿಗೆ ಅನುಮತಿ ನೀಡಿದೆ.

5. ಸದರಿ ಆದೇಶವನ್ನು ಆರ್ಥಿಕ ಇಲಾಖೆ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ : 16.05.2008ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಗಳವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರು, ಶಿಕ್ಷಣ ಇಲಾಖೆ, ಇವರ ಟಿಪ್ಪಣಿ ಸಂಖ್ಯೆ : ಶಿಇ 1855 ಐಎಫ್ (ಬಿ&ಎ) 2009, ದಿನಾಂಕ : 11.08.2009ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ.ಎಫ್. ಮಾಗಿ**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

**ಸರ್ಕಾರಿ ಆದೇಶ ಸಂಖ್ಯೆ ಇಡಿ: 76: ಯೋಯೋಕ 2009 (ಭಾಗ–4) ದಿನಾಂಕ : 17.08.2009**
**[ ಇಡಿ 103 : ಸ್ವೀಮರ (ಯುನಿಕ್) 2009, ದಿನಾಂಕ : 17.08.2009 ] ಕ್ಕೆ ಅನುಬಂಧ**
**ರಾಜ್ಯ ಶಿಕ್ಷಣ, ಸಂಶೋಧನೆ ಮತ್ತು ತರಬೇತಿ ಇಲಾಖೆ**

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಆಯವ್ಯಯ ಲೆಕ್ಕ ಶೀರ್ಷಿಕೆ ಮತ್ತು ಕಾರ್ಯಕ್ರಮದ ಹೆಸರು | 2009–10ನೇ ಸಾಲಿಗೆ ಒದಗಿಸಲಾದ ಅನುದಾನ | ಬಿಡುಗಡೆ ಮಾಡಿರುವ ಎರಡನೇ ತ್ರೈಮಾಸಿಕ ಅನುದಾನ |
|---|---|---|---|
| 1. | ನಿರ್ದೇಶನ ಮತ್ತು ಆಡಳಿತ [2202–02–001–0–04] | 2202–02–001–0–04–002 – ರೂ. 3.41 ಲಕ್ಷ | 1.28 |
| | | 2202–02–001–0–04–011 – ರೂ. 1.30 ಲಕ್ಷ | 0.49 |
| | | 2202–02–001–0–04–014 – ರೂ. 0.56 ಲಕ್ಷ | 0.21 |
| | | 2202–02–001–0–04–041 – ರೂ. 9.73 ಲಕ್ಷ | 3.65 |
| 2. | ತರಬೇತಿಯಲ್ಲಿರುವ ಪದವೀಧರ ಶಿಕ್ಷಕರು (2202–02–105–0–01–015) | ರೂ. 10.00 ಲಕ್ಷ (ಹತ್ತು ಲಕ್ಷ ರೂಪಾಯಿಗಳು ಮಾತ್ರ) | 3.75 |
| 3. | ರಾಜ್ಯ ವಿಜ್ಞಾನ ಸಂಸ್ಥೆ ಅಭಿವೃದ್ಧಿ ಕಾರ್ಯಕ್ರಮ (2202–80–800–0–06–059) | ರೂ. 25.00 ಲಕ್ಷ (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) | 9.38 |
| 4. | ಎಸ್.ಸಿ.ಇ.ಆರ್.ಟಿ (2202–80–800–0–07–059) | 20.00 ಲಕ್ಷ ರೂಪಾಯಿಗಳು (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) | 7.50 |
| 5. | ಶಿಕ್ಷಣ ಮತ್ತು ತರಬೇತಿಗಾಗಿ ಜಿಲ್ಲಾ ಸಂಸ್ಥೆ ಮತ್ತು ಅಧ್ಯಾಪಕರ ಶಿಕ್ಷಣ ಮತ್ತು ತರಬೇತಿಗಾಗಿ ಕಾಲೇಜು (2202–80–800–0–19) | ರೂ. 3598.24 ಲಕ್ಷ (ಮೂರು ಸಾವಿರದ ಐದು ನೂರ ತೊಂಭತ್ತೆಂಟು ಲಕ್ಷ ಇಪ್ಪತ್ತ ನಾಲ್ಕು ಸಾವಿರ ರೂಪಾಯಿಗಳ ಮಾತ್ರ) | 1349.34 |

| ಕ್ರ. ಸಂ. | ಆಯವ್ಯಯ ಲೆಕ್ಕ ಶೀರ್ಷಿಕೆ ಮತ್ತು ಕಾರ್ಯಕ್ರಮದ ಹೆಸರು | 2009–10ನೇ ಸಾಲಿಗೆ ಒದಗಿಸಲಾದ ಅನುದಾನ | ಬಿಡುಗಡೆ ಮಾಡಿರುವ ಎರಡನೇ ತ್ರೈಮಾಸಿಕ ಅನುದಾನ |
|---|---|---|---|
| 6. | ಪ್ರೌಢಶಾಲೆಯಲ್ಲಿ ಗಣಕ ಶಿಕ್ಷಣದ ಸಾಕ್ಷರತೆ (2202–80–800–0–23) 059 | ರೂ. 7000.00 ಲಕ್ಷ (ಏಳು ಸಾವಿರ ಲಕ್ಷ ರೂಪಾಯಿಗಳು ಮಾತ್ರ) | 2625.00 |
| 7. | ಮಾಹಿತಿ ಸಿಂಧು – (2202–80–800–0–26) | 2202–80–800–0–26–059–<br>ಇತರೆ ಖರ್ಚು ರೂ. 270.00 ಲಕ್ಷ<br>422–ವಿಶೇಷ ಘಟಕ ಯೋಜನೆ ರೂ. 430.00 ಲಕ್ಷ<br>423– ಗಿರಿಜನ ಉಪಯೋಜನೆ ರೂ. 100.00 ಲಕ್ಷ | <br>101.25<br>161.25<br>37.50 |
| 8. | ಎಜ್ಯುಸ್ಯಾಟ್ (2202–01–800–1–79) 059 | ರೂ. 200.00 ಲಕ್ಷ (ಎರಡು ನೂರು ಲಕ್ಷ ರೂಪಾಯಿಗಳು ಮಾತ್ರ) | 75.00 |

**ಐ.ಎಫ್. ಮಾಗಿ**

ಪಿ.ಆರ್. 1997

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

## ಉನ್ನತ ಶಿಕ್ಷಣ ಸಚಿವಾಲಯ

**ವಿಷಯ:** ಆರ್.ಐ.ಡಿ.ಎಫ್.–14 ಯೋಜನೆಯಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ:** 1. ಪ್ರಬಂಧಕರು, ನಬಾರ್ಡ್ ಸಂಸ್ಥೆ, ಬೆಂಗಳೂರು ರವರ ಪತ್ರ ಸಂಖ್ಯೆ: NB/SPD/2443/RIDF-14 (Karnataka RO) 101/PSC/2008-09 ದಿನಾಂಕ: 28.01.2009.

2. ಸರ್ಕಾರ ಆದೇಶ ಸಮ ಸಂಖ್ಯೆ ದಿನಾಂಕ 12.06.2009.

3. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಾಶಿಇ 14ಯೋಜನೆ 2008–09, ದಿನಾಂಕ : 25.06.2009.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖದಲ್ಲಿ ಓದಲಾದ ನಬಾರ್ಡ್ ಸಂಸ್ಥೆಯ ಪ್ರಬಂಧಕರು, ರವರ ಪತ್ರದಲ್ಲಿ ಆರ್.ಐ.ಡಿ.ಎಫ್–14ರ ಯೋಜನೆಯಡಿಯಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿಗೆ ಒಟ್ಟು ರೂ. 3,000.00 ಲಕ್ಷಗಳ ವೆಚ್ಚದಲ್ಲಿ ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡಲು ಒಟ್ಟು ರೂ. 2550.00 ಲಕ್ಷಗಳ ಸಾಲವನ್ನು ಮಂಜೂರು ಮಾಡಿದೆ.

ಓದಲಾದ (2)ರ ದಿನಾಂಕ: 12.06.2009ರ ಸರ್ಕಾರಿ ಆದೇಶದಲ್ಲಿ ಕಾಮಗಾರಿ ಸಲುವಾಗಿ ಕಾರ್ಯಾದೇಶ ಹೊರಡಿಸಲಾಗಿತ್ತು. ಆದರೆ, (3) ರಲ್ಲಿ ಓದಲಾದ ದಿನಾಂಕ : 25.06.2009ರ ಪತ್ರದಲ್ಲಿ ಆಯುಕ್ತರು ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ಇವರು ನಬಾರ್ಡ್ ಸಂಸ್ಥೆಯ ಮಂಜೂರಾತಿ ಆದೇಶಾನುಸಾರ 27 ಕಾಲೇಜು ಕಾಮಗಾರಿಗಳನ್ನು ಪ್ರಾರಂಭಿಸಲು ಹೊರಡಿಸಲಾದ ದಿನಾಂಕ: 12.06.2009ರ ಸರ್ಕಾರಿ ಆದೇಶದ ಅನುಬಂಧ 1,2 ಮತ್ತು 3ರಲ್ಲಿ ನ್ಯೂನತೆಗಳಿದ್ದು ಅವುಗಳನ್ನು ಸರಿಪಡಿಸಿ, ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಆದುದರಿಂದ ದಿನಾಂಕ 12.06.2009ರ ಸರ್ಕಾರಿ ಆದೇಶ ಹಿಂದಕ್ಕೆ ಪಡೆದು ಪರಿಷ್ಕೃತ ಆದೇಶ ಹೊರಡಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 03 ಯೋಸಕ 2008, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ: ಇಡಿ 03 ಯೋಸಕ 2008 ದಿನಾಂಕ:12.06.2009 ನ್ನು ಈ ಮೂಲಕ ಹಿಂಪಡೆಯಲಾಗಿದೆ. ನಬಾರ್ಡ್ ಸಂಸ್ಥೆಯವರು ಅನುಮೋದಿಸಿರುವ ಪಟ್ಟಿಯಲ್ಲಿನ ಈ ಕೆಳಕಂಡ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ಕಾಮಗಾರಿಗಳನ್ನು ರೈಟ್ಸ್ ಸಂಸ್ಥೆಗೆ (ಕರ್ನಾಟಕ ಪಾರದರ್ಶಕ ಕಾಯ್ದೆಯಡಿ ವಿನಾಯಿತಿ ನೀಡಿದೆ) ವಹಿಸಿ 2009–10ನೇ ಸಾಲಿಗೆ ಒದಗಿಸಲಾಗಿರುವ ಅನುದಾನದಲ್ಲಿ ಕೂಡಲೇ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವಂತೆ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ಇವರಿಗೆ ಈ ಕೆಳಕಂಡ ಷರತ್ತನ್ನು ವಿಧಿಸಿ ಅನುಮತಿ ನೀಡಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಕಾಮಗಾರಿಗಳ ವಿವರ | ಒಟ್ಟು ಅಂದಾಜು ಮೊತ್ತ |
|---|---|---|
| 1. | ಸ.,ಪ್ರ.ದ. ಕಾಲೇಜು, ಸೂಲಿಬೆಲೆ, ಬೆಂಗಳೂರು ಗ್ರಾ. ಜಿಲ್ಲೆ. | 110.00 |
| 2. | ಸ.,ಪ್ರ.ದ. ಕಾಲೇಜು, ಬಡವನಹಳ್ಳಿ, ತುಮಕೂರು ಜಿಲ್ಲೆ | 100.00 |
| 3. | ಸ.,ಪ್ರ.ದ. ಕಾಲೇಜು, ನರೇಗಲ್, ಗದಗ ಜಿಲ್ಲೆ | 110.00 |
| 4. | ಸ.,ಪ್ರ.ದ. ಕಾಲೇಜು, ಮುಳಗುಂದ, ಗದಗ ಜಿಲ್ಲೆ | 110.00 |
| 5. | ಸ.,ಪ್ರ.ದ. ಕಾಲೇಜು, ಜಾಲಹಳ್ಳಿ, ರಾಯಚೂರು ಜಿಲ್ಲೆ | 110.00 |
| 6. | ಸ.,ಪ್ರ.ದ. ಕಾಲೇಜು, ಮುದಗಲ್, ರಾಯಚೂರು ಜಿಲ್ಲೆ | 110.00 |
| 7. | ಸ.,ಪ್ರ.ದ. ಕಾಲೇಜು, ಮರಿಯಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ | 110.00 |
| 8. | ಸ.,ಪ್ರ.ದ. ಕಾಲೇಜು, ತೆಕ್ಕಲಕೋಟೆ, ಬಳ್ಳಾರಿ ಜಿಲ್ಲೆ | 110.00 |
| 9. | ಸ.,ಪ್ರ.ದ. ಕಾಲೇಜು, ಅಳವಂಡಿ, ಕೊಪ್ಪಳ ಜಿಲ್ಲೆ | 110.00 |
| 10. | ಸ.,ಪ್ರ.ದ. ಕಾಲೇಜು, ಇರಕಲ್‌ಗಡ, ಕೊಪ್ಪಳ ಜಿಲ್ಲೆ | 110.00 |
| 11. | ಸ.,ಪ್ರ.ದ. ಕಾಲೇಜು, ಶ್ರೀರಾಮನಗರ, ಕೊಪ್ಪಳ ಜಿಲ್ಲೆ | 110.00 |
| 12. | ಸ.,ಪ್ರ.ದ. ಕಾಲೇಜು, ಹಿರೇವಂಕಲಕುಂಟೆ, ಕೊಪ್ಪಳ ಜಿಲ್ಲೆ | 110.00 |
| | ಒಟ್ಟು | **1320.00** |

**ಷರತ್ತುಗಳು:**

- ಸದರಿ ಕಾಮಗಾರಿಗಳನ್ನು ಈಗಾಗಲೇ ನಿಗದಿಯಾಗಿರುವ ಆಯವ್ಯಯದ ಮಿತಿಯಲ್ಲಿಯೇ ಪೂರ್ಣಗೊಳಿಸಲು ಸೂಚಿಸಿದೆ.
- ಕಟ್ಟಡ ನಿರ್ಮಾಣದ ಗುಣಮಟ್ಟದ ಬಗ್ಗೆ ನಿಗಾ ವಹಿಸಲು ಸೂಕ್ತ ಕ್ರಮ ಕೈಗೊಳ್ಳತಕ್ಕದ್ದು. ಕೇಂದ್ರ ಕಛೇರಿಯಿಂದ ತಿಂಗಳಿಗೊಮ್ಮೆ ಕಟ್ಟಡ ನಿರ್ಮಾಣದ ಅಭಿವೃದ್ಧಿಯನ್ನು ಪರಿಶೀಲಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸತಕ್ಕದ್ದು.
- ಕಟ್ಟಡ ನಿರ್ಮಾಣ ಕಾರ್ಯವನ್ನು ವಹಿಸುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸತಕ್ಕದ್ದು.
- ನಬಾರ್ಡ್ ಸಂಸ್ಥೆಯವರು ಈಗಾಗಲೇ ಅನುಮೋದಿಸಿರುವ ಮಾದರಿಯಲ್ಲಿಯೇ ಕಟ್ಟಡ ನಿರ್ಮಾಣವನ್ನು ಕೈಗೆತ್ತಿಕೊಳ್ಳಲು ಸೂಚಿಸತಕ್ಕದ್ದು.
- ಕಟ್ಟಡ ನಿರ್ಮಾಣ ಕಾರ್ಯವನ್ನು ಪ್ರಾರಂಭಿಸಿದ ಹತ್ತು ತಿಂಗಳೊಳಗಾಗಿ ಪೂರ್ಣಗೊಳಿಸಲು ಸಂಬಂಧಪಟ್ಟ ಕಟ್ಟಡ ನಿರ್ಮಾಣ ಸಂಸ್ಥೆಗೆ ಆದೇಶ ನೀಡತಕ್ಕದ್ದು. ಕಟ್ಟಡವನ್ನು ಪೂರ್ಣಗೊಳಿಸಿ ಕಾಲೇಜಿಗೆ ಹಸ್ತಾಂತರಿಸಿದ ನಂತರ ಸಂಬಂಧಿಸಿದ ಕಾಲೇಜಿನ ಪ್ರಾಂಶುಪಾಲರು ಪ್ರಮಾಣ ಪತ್ರವನ್ನು ಕೇಂದ್ರ ಕಛೇರಿಗೆ ಸಲ್ಲಿಸಲು ಸೂಚನೆ ನೀಡುವುದು.
- ಪ್ರತಿ ಮಾಹೆಯ ಕಾಮಗಾರಿಯ ಪ್ರಗತಿ ವರದಿಯನ್ನು ಆಯಾ ಮಾಹೆಯ ಎಂ.ಎಂ.ಆರ್. ವರದಿಯಲ್ಲಿ ನಮೂದಿಸತಕ್ಕದ್ದು. ಕಾಮಗಾರಿ ಪ್ರಗತಿಯಾಗುತ್ತಿದಂತೆಯೇ ನಬಾರ್ಡ್‌ನಿಂದ ಮರು ಪಾವತಿ ಪಡೆಯಲು ಪ್ರಸ್ತಾವನೆಯನ್ನು ಕೂಡಲೇ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
- ಕಾಮಗಾರಿಯ ಪ್ರಗತಿಯನ್ನು ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡಲು ಸೂಚಿಸಿದೆ.

ಇದಕ್ಕೆ ಸಂಬಂಧಿಸಿದ ಮೊತ್ತವನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕ 4202–01–203–1–01–139 ಅಡಿ ಒದಗಿಸಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಎಂ. ನಂದಕುಮಾರ್**

ಪಿ.ಆರ್. 1998

ಸರ್ಕಾರದ ಅಧೀನ ಕಾರ್ಯದರ್ಶಿ,

ಉನ್ನತ ಶಿಕ್ಷಣ ಇಲಾಖೆ (ಯೋಜನೆ)

## ಕಾರ್ಮಿಕ ಸಚಿವಾಲಯ

**ವಿಷಯ :** ಶ್ರೀ ಶಿವಲಿಂಗಮೂರ್ತಿ, ಜಂಟಿ ನಿರ್ದೇಶಕರು (ತರಬೇತಿ), ಉದ್ಯೋಗ ಮತ್ತು ತರಬೇತಿ ಇಲಾಖೆ, ವಿಭಾಗೀಯ ಕಛೇರಿ, ಗುಲ್ಬರ್ಗಾ ರವರ ವಿರುದ್ಧ ದಾಖಲಾದ ಟ್ರ್ಯಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ :**
1 ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್ /ಐಎನ್‌ವಿ(ಜಿ) ಸಿಟಿ/ಕ್ರೈಂ. 9/2004 ದಿನಾಂಕ:21.4.2009
2. ತನಿಖಾಧಿಕಾರಿಯ ವರದಿ ಸಂಖ್ಯೆ:9/2004 ದಿನಾಂಕ:12/3/2004
3. ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ ಸಾಕ್ಷಿದಾರರ ಹೇಳಿಕೆಗಳು, ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ:**

ಶ್ರೀ ಶಿವಲಿಂಗಮೂರ್ತಿ, ಜಂಟಿ ನಿರ್ದೇಶಕರು (ತರಬೇತಿ), ಉದ್ಯೋಗ ಮತ್ತು ತರಬೇತಿ ಇಲಾಖೆ, ವಿಭಾಗೀಯ ಕಛೇರಿ, ಗುಲ್ಬರ್ಗಾ ರವರ ವಿರುದ್ಧ ಗುನ್ನೆ ಸಂಖ್ಯೆ:9/2004 ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ನಗರ ವಿಭಾಗ, ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು, ಮಾನ್ಯ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ:21/4/2009 ರೊಡನೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ–1988ರ 19(1)(ಬಿ) ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಉಲ್ಲೇಖಿತ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)ಸಿಟಿ/ಕ್ರೈಂ.9/2004 ದಿನಾಂಕ:21.4.2009 ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಎ.ಎನ್. ರಾಜಣ್ಣ, ಆರಕ್ಷಕ ಉಪ ಅಧೀಕ್ಷಕರು, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ ಬೆಂಗಳೂರು ರವರ ಫಿರ್ಯಾದಿ ದಿನಾಂಕ:26.7.2003
2) ಪ್ರಥಮ ವರ್ತಮಾನ ವರದಿ ಬೆಂಗಳೂರು ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ:9/.2004
3) ಪ್ರಾಯೋಗಿಕ ಪಂಚನಾಮೆ ದಿನಾಂಕ:26.7.2003
4) ಟ್ರ್ಯಾಪ್‌ನಮಹಜರ್ ದಿನಾಂಕ:26.7.2003
5) ಕೃತ್ಯ ನಡೆದ ಸ್ಥಳದ ನಕಾಶೆ: ನಿರ್ದೇಶಕರ ಕಛೇರಿ, ಉದ್ಯೋಗ ವಿನಿಮಯ ಮತ್ತು ತರಬೇತಿ ಇಲಾಖೆ, ಪ್ರಶಾಂತ್ ಕಾಂಪ್ಲೆಕ್ಸ್, ಸುಬ್ಬಯ್ಯ ಸರ್ಕಲ್, ಬೆಂಗಳೂರು.
6) ಸಾಕ್ಷಿಗಳ ಹೇಳಿಕೆಗಳು
    1) ಶ್ರೀ ಪೋಲನ್‌ರಾಜು, ದ್ವಿ.ದ.ಸ. ಸಮಾಜ ಕಲ್ಯಾಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು
    2) ಶ್ರೀಮತಿ ಕಾಂತಿಮತಿ, ದ್ವಿ.ದ.ಸ. ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು
    3) ಶ್ರೀ ಗುಂಡೂರಾವ್, ಪ್ರ.ದ.ಸ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು
    4) ಶ್ರೀ ಬಿ.ಕೆ. ಮಂಜುನಾಥ, ದ್ವಿ.ದ.ಸ. ರೇಷ್ಮೆ ಆಯುಕ್ತರು ಮತ್ತು ನಿರ್ದೇಶಕರ ಕಛೇರಿ ಬಹುಮಹಡಿಗಳ ಕಟ್ಟಡ, ಬೆಂಗಳೂರು
    5) ಶ್ರೀ ಕೆ.ಹೆಚ್. ನರಸೇಗೌಡ, ಪ್ರ.ದ.ಸ. ಕೆ.ಜಿ.ಐ.ಡಿ. ವಿವಿ ಗೋಪುರ, ಬೆಂಗಳೂರು
    6) ಶ್ರೀ ಯೋಗೇಶ್, ಪ್ರ.ದ.ಸ. ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು
    7) ಶ್ರೀ ಮುದ್ದಣ್ಣ, ಉಪನಿರ್ದೇಶಕರು ಮತ್ತು ಪ್ರಾಂಶುಪಾಲರು, ಕೈಗಾರಿಕಾ ತರಬೇತಿ ಸಂಸ್ಥೆ, ಪೀಣ್ಯಾ, ಬೆಂಗಳೂರು
    8) ಶ್ರೀ ಪ್ರೇಮ್‌ಕುಮಾರ್, ಪ್ರ.ದ.ಸ. ಕೈಗಾರಿಕಾ ತರಬೇತಿ ಸಂಸ್ಥೆ, ಪೀಣ್ಯಾ, ಬೆಂಗಳೂರು
    9) ಶ್ರೀ ಹೆಚ್. ಬಾಬು, ತರಬೇತಿ ಅಧಿಕಾರಿ, ಕೈಗಾರಿಕಾ ತರಬೇತಿ ಸಂಸ್ಥೆ, ಪೀಣ್ಯಾ, ಬೆಂಗಳೂರು
    10) ಶ್ರೀ ರಾಜೇಂದ್ರಸಿಂಗ್, ಪೊಲೀಸ್ ಕಾನ್ಸಟೇಬಲ್, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು
    11) ಶ್ರೀಮತಿ ಜಿ.ಕೆ. ಸಾವಿತ್ರಿಬಾಯಿ, ಮಹಿಳಾ ಪೊಲೀಸ್ ಕಾನ್ಸ್‌ಟೇಬಲ್, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು
    12) ಶ್ರೀ ಕೆ.ಎಲ್. ಚಂದ್ರಶೇಖರ್, ಪೊಲೀಸ್ ಕಾನ್ಸ್‌ಟೇಬಲ್, ನಗರ ವಿಭಾಗ,. ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

7) **ಲಂಚ ಕೇಳಲು ಆಧಾರವಾದ ವಿಷಯ:** ಉದ್ಯೋಗ ವಿನಿಮಯ ಮತ್ತು ತರಬೇತಿ ಇಲಾಖೆಯ ಜಂಟೀ ನಿರ್ದೇಶಕರಾದ ಶ್ರೀ ಶಿವಲಿಂಗಮೂರ್ತಿರವರು ಜುಲೈ 2003ರಲ್ಲಿ ನಡೆಸಲಾಗುವ ಐ.ಟಿ.ಐ ವಿದ್ಯಾರ್ಥಿಗಳ ಪರೀಕ್ಷೆಯಲ್ಲಿ ಹಾಜರಾಗುವ ಪರೀಕ್ಷಾರ್ಥಿಗಳಿಂದ ಅವರನ್ನು ಪರೀಕ್ಷೆಯಲ್ಲಿ ಕಾಪಿ ಮಾಡಲು ಅವಕಾಶ ಮಾಡಿಕೊಡಲು ಮತ್ತು ಖಾಸಗಿ ಐ.ಟಿ.ಐ ಸಂಸ್ಥೆಗಳಿಗೆ ಅಫಿಲಿಯೇಷನ್ ಮಂಜೂರು ಮಾಡಿಸಿಕೊಡಲು ಲಂಚದ ಹಣವನ್ನು ಐ.ಟಿ.ಐ. ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ಮುಖಾಂತರ ವಸೂಲು ಮಾಡಲಾಗುತ್ತಿದೆ ಎಂಬ ಖಚಿತ ವರ್ತಮಾನವೇ ಆಧಾರವಾಗಿದೆ.

ತನಿಖಾಧಿಕಾರಿಗಳಾದ ಶ್ರೀ ಎ.ಎನ್. ರಾಜಣ್ಣ ಆರಕ್ಷಕ ಉಪ ಅಧೀಕ್ಷಕರು, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು, ಶ್ರೀ ಶಿವಲಿಂಗಮೂರ್ತಿ, ಜಂಟಿ ನಿರ್ದೇಶಕರು (ತರಬೇತಿ), ಉದ್ಯೋಗ ಮತ್ತು ತರಬೇತಿ ಇಲಾಖೆ, ವಿಭಾಗೀಯ ಕಛೇರಿ, ಗುಲ್ಬರ್ಗಾ ರವರ ವಿರುದ್ಧ ದಂಡಾರ್ಹ ಪ್ರಕರಣವನ್ನು ದಿನಾಂಕ:26.7.2003ರಂದು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ 9/2004ರಲ್ಲಿ ಲಂಚ ನಿರೋಧಕ ಕಾಯ್ದೆ–1988ರ ಕಲಂ 7, 13(1)ಡಿ ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಉದ್ಯೋಗ ವಿನಿಮಯ ಮತ್ತು ತರಬೇತಿ ಇಲಾಖೆಯ ಜಂಟಿ ನಿರ್ದೇಶಕರಾದ ಶ್ರೀ ಶಿವಲಿಂಗಮೂರ್ತಿರವರು ಜುಲೈ 2003ರಲ್ಲಿ ನಡೆಸಲಾಗುವ ಐ.ಟಿ.ಐ ವಿದ್ಯಾರ್ಥಿಗಳ ಪರೀಕ್ಷೆಯಲ್ಲಿ ಹಾಜರಾಗುವ ಪರೀಕ್ಷಾರ್ಥಿಗಳಿಂದ ಅವರನ್ನು ಪರೀಕ್ಷೆಯಲ್ಲಿ ಕಾಪಿ ಮಾಡಲು ಅವಕಾಶ ಮಾಡಿಕೊಡಲು ಮತ್ತು ಖಾಸಗಿ ಐ.ಟಿ.ಐ ಸಂಸ್ಥೆಗಳಿಗೆ ಅಫಿಲಿಯೇಷನ್ ಮಂಜೂರು ಮಾಡಿಸಿಕೊಡಲು ಲಂಚದ ಹಣವನ್ನು ಐ.ಟಿ.ಐ ಸಂಸ್ಥೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ಮುಖಾಂತರ ವಸೂಲು ಮಾಡಲಾಗುತ್ತಿದೆ. ಎಂಬ ಖಚಿತ ವರ್ತಮಾನದ ಮೇರೆಗೆ ಫಿರ್ಯಾದುದಾರರಾದ ಶ್ರೀ ಎ.ಎನ್. ರಾಜಣ್ಣ ಆರಕ್ಷಕ ಉಪ ಅಧೀಕ್ಷಕರು, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ದಿನಾಂಕ:26.7.2003ರಂದು ಫಾರ್ಮ ನಂಬರ್ 1 ಮತ್ತು 2 ರಲ್ಲಿ ವರದಿಯನ್ನು ಮಾನ್ಯ ಲೋಕಾಯುಕ್ತ ನ್ಯಾಯಮೂರ್ತಿಗಳಿಗೆ ಸಲ್ಲಿಸಿ ಆರೋಪಿಯ ಕಛೇರಿ ಮತ್ತು ವಾಸದ ಮನೆಯನ್ನು ಶೋಧನೆ ಮಾಡಲು ಸರ್ಚ್ ವಾರೆಂಟ್ ಪಡೆದು ನಿರ್ದೇಶಕರ ಕಛೇರಿ, ಉದ್ಯೋಗ ಮತ್ತು ತರಬೇತಿ ಇಲಾಖೆ ಇಲ್ಲಿಗೆ ಪಂಚರು ಹಾಗೂ ಲೋಕಾಯುಕ್ತ ಅಧಿಕಾರಿಗಳು ಮತ್ತು ಸಿಬ್ಬಂದಿ ವರ್ಗದವರೊಡನೆ ಗುಪ್ತವಾಗಿ ಮಧ್ಯಾಹ್ನ ಒಂದು ಘಂಟೆಗೆ ಬಂದು ಸೂಕ್ಷ್ಮವಾಗಿ ಅಲ್ಲಿನ ಚಲನವಲನಗಳನ್ನು ಗಮನಿಸುತ್ತಿದ್ದಾಗ ಇಬ್ಬರು ವ್ಯಕ್ತಿಗಳು ತಮ್ಮ ಕೈಗಳಲ್ಲಿ ಒಂದು ಬ್ಯಾಗ್ ಮತ್ತು ಪ್ಲಾಸ್ಟಿಕ್ ಕವರುಗಳನ್ನು ಹಿಡಿದುಕೊಂಡು ಅನುಮಾನಸ್ಪದ ರೀತಿಯಲ್ಲಿ ವರ್ತಿಸುತ್ತಿರುವಾಗ ಅವರನ್ನು ಹಿಡಿದು ಪ್ರಶ್ನಿಸಿದಾಗ ಆ ವ್ಯಕ್ತಿಗಳು ಹಣ ನೀಡಲು ಬಂದಿದ್ದಾಗಿ ತಿಳಿಸಿದರು. ನಂತರ ಇಬ್ಬರೂ ವ್ಯಕ್ತಿಗಳನ್ನು ನಿರ್ದೇಶಕರ ಕೊಠಡಿಯೊಳಗೆ ಕರೆದುಕೊಂಡು ಹೋಗಿ ವಿಚಾರಣೆಗೊಳಪಡಿಸಿದಾಗ ಆ ಇಬ್ಬರೂ ವ್ಯಕ್ತಿಗಳು ಆರೋಪಿಯ ಆದೇಶದಂತೆ 2003ನೇ ಇಸವಿ ಜುಲೈ ಮಾಹೆಯಲ್ಲಿ ನಡೆಸಲಾಗುವ ಐ.ಟಿ.ಐ ಪರೀಕ್ಷಾರ್ಥಿಗಳಿಗೆ ಪರೀಕ್ಷೆ ಬರೆಯುವ ಸಮಯದಲ್ಲಿ ಕಾಪಿ ಮಾಡಲು ಅವಕಾಶ ಮಾಡಿಕೊಡುತ್ತೇವೆಂದು ಭರವಸೆ ನೀಡಿ, ಪರೀಕ್ಷಾರ್ಥಿಗಳಿಂದ ಹಣ ವಸೂಲಿ ಮಾಡಿ ತಂದಿರುವುದಾಗಿ ತಿಳಿಸಿರುವರು– ಈ ರೀತಿ ಸಿಕ್ಕಿಬಿದ್ದ ವ್ಯಕ್ತಿಗಳೆಂದರೆ, ಶ್ರೀ ಹೆಚ್. ಬಾಬು, ತರಬೇತಿ ಅಧಿಕಾರಿ ಮತ್ತು ಶ್ರೀ ಪ್ರೇಮ್ ಕುಮಾರ್, ಪ್ರಥಮ ದರ್ಜೆ ಸಹಾಯಕರುಗಳಾಗಿದ್ದು, ಇವರುಗಳ ಮೇಲಿನ ವಿಚಾರಣೆ ಆಧಾರದ ಮೇಲೆ ಶೋಧನಾ ಮಹಜರನ್ನು ದಿನಾಂಕ:26.7.2003 ರಂದು ಮಧ್ಯಾಹ್ನ 1–45 ಘಂಟೆಯಿಂದ ಸಂಜೆ 5–30 ಘಂಟೆಯವರೆಗೆ ನಡೆಸಿ ಪಂಚರ ಸಮಕ್ಷಮ ವರದಿ ತಯಾರಿಸಲಾಯಿತು. ಮತ್ತು ಲಂಚ ನೀಡಲು ತಂದಿದ್ದ ಏಳು ಲಕ್ಷ ರೂಪಾಯಿಗಳು, ತಪಾಸಣೆಯ ಕಾಲಕ್ಕೆ ಜಂಟಿ ನಿರ್ದೇಶಕರ ಬಳಿ ರೂ. 10,000/– ಶ್ರೀ ಪ್ರೇಮ್ ಕುಮಾರ್ ರವರ ಬಳಿ ರೂ. 4480/– ಮತ್ತು ಶ್ರೀ ಹೆಚ್. ಬಾಬುರವರ ಬಳಿ ರೂ. 520/–ಗಳಿದ್ದು ಈ ಹಣವನ್ನು ಸಹ ಅಮಾನತ್ತುಪಡಿಸಲಾಯಿತು.

ಜಂಟಿ ನಿರ್ದೇಶಕರಾದ ಶ್ರೀ ಶಿವಲಿಂಗಮೂರ್ತಿರವರ ವಾಸದ ಮನೆಯನ್ನು ಶೋಧನೆ ಮಾಡಿ ವರದಿ ನೀಡುವಂತೆ ಅಂದಿನ ಪೊಲೀಸ್ ಇನ್ಸ್‌ಪೆಕ್ಟರ್ ಶ್ರೀ ಟಿ. ಮಲ್ಲೇಶ್ ರವರಿಗೆ ಫಿರ್ಯಾದುದಾರರಾದ ಶ್ರೀ ಎ.ಎನ್. ರಾಜಣ್ಣ ಆರಕ್ಷಕ ಉಪ ಅಧೀಕ್ಷಕರು, ನಗರ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ನೀಡಿದ ಸೂಚನೆಯ ಮೇರೆಗೆ ಶ್ರೀ ಟಿ. ಮಲ್ಲೇಶ್, ಪಿ.ಐ. ನಗರ ವಿಭಾಗ, ಕರ್ನಾಟಕ ಲೋಕಾಯುಕ್ತರವರು ಶ್ರೀ ಶಿವಲಿಂಗಮೂರ್ತಿರವರ ವಾಸದ ಮನೆಯಾದ ನಂ. 102, ಬಿ. ಬ್ಲಾಕ್, ಟೆರೇಸ್, ಅಪಾರ್ಟ್‌ಮೆಂಟ್, ಬನಶಂಕರಿ ಮೂರನೇ ಹಂತ, ಬೆಂಗಳೂರು ಇಲ್ಲಿ ಪಂಚರೊಂದಿಗೆ ದಿನಾಂಕ:26.7.2003ರಂದು ಮಧ್ಯಾಹ್ನ 2–45 ಘಂಟೆಯಿಂದ ಸಂಜೆ 6–00ಘಂಟೆಯವರೆಗೆ ಶೋಧನಾ ಕಾರ್ಯ ನಡೆಸಿ ಮಹಜರನ್ನು ಸಿದ್ದಪಡಿಸಿ ಅಲ್ಲಿ ದೊರೆತ ನಗದು ಹಣ ರೂ. 12,15, 000/–ಗಳನ್ನು ತನಿಖಾಧಿಕಾರಿಗಳಾದ ಶ್ರೀ ಟಿ. ಮಲ್ಲೇಶ್ ರವರು ಅಮಾನತ್ತುಪಡಿಸಿಕೊಂಡಿರುತ್ತಾರೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ–1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ–1988ರ ಅನ್ವಯ ಕಲಂ, 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 8(20) ಹಾಗೂ 95(3)ನ್ನು ಓದಿಕೊಂಡಂತೆ ಕೆ.ಸಿ.ಎಸ್ (ಸಿಸಿಎ) ನಿಯಮ 1957ರ ನಿಯಮ 8(viii)ರ ಪ್ರಕಾರ ಕೆಲಸದಿಂದ ತೆಗೆದುಹಾಕಲು ಅಧಿಕಾರ ಹೊಂದಿರುತ್ತದೆ. ಮೇಲೆ ನಮೂದಿಸಿದ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಮನಗಂಡು, ಆರೋಪಿ ಆರೋಪಣೆ ಎಸಗಿರುವ ಬಗ್ಗೆ ಸಾಬೀತಾಗಿರುವುದು ಮನವರಿಕೆಯಾಗಿದೆ. ಆದ್ದರಿಂದ ಲಂಚ ನಿರೋಧಕ ಕಾಯ್ದೆ–1988ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ ಶ್ರೀ ಶಿವಲಿಂಗಮೂರ್ತಿ, ಜಂಟಿ ನಿರ್ದೇಶಕರು (ತರಬೇತಿ), ಉದ್ಯೋಗ ಮತ್ತು ತರಬೇತಿ ಇಲಾಖೆ, ವಿಭಾಗೀಯ ಕಛೇರಿ, ಗುಲ್ಬರ್ಗಾ ರವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಾಇ 231 ಇಟಿಐ 2009, ಬೆಂಗಳೂರು, ದಿನಾಂಕ:9ನೇ ಜುಲೈ 2009**

ಆರೋಪಿಯಾದ ಶ್ರೀ ಶಿವಲಿಂಗಮೂರ್ತಿ, ಜಂಟಿ ನಿರ್ದೇಶಕರು (ತರಬೇತಿ), ಉದ್ಯೋಗ ಮತ್ತು ತರಬೇತಿ ಇಲಾಖೆ, ವಿಭಾಗೀಯ ಕಛೇರಿ, ಗುಲ್ಬರ್ಗಾ ಇವರನ್ನು ಹುದ್ದೆಯಿಂದ ತೆಗೆದು ಹಾಕುವ /(ವಜಾಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಶಿವಲಿಂಗಮೂರ್ತಿ, ಜಂಟಿ ನಿರ್ದೇಶಕರು (ತರಬೇತಿ), ಉದ್ಯೋಗ ಮತ್ತು ತರಬೇತಿ ಇಲಾಖೆ, ವಿಭಾಗೀಯ ಕಛೇರಿ, ಗುಲ್ಬರ್ಗಾ ಇವರನ್ನು ಲಂಚ ನಿರೋಧಕ ಕಾಯ್ದೆ–1988ರ ಕಲಂ 7, 13(1)(ಡಿ) ಜೊತೆಯಲ್ಲಿ ಓದಲಾದ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಇದೇ ಕಾಯ್ದೆಯ ಕಲಂ 19(1) (ಬಿ) ಅಡಿಯಲ್ಲಿ ಈ ಮೂಲಕ ಮಂಜೂರಾತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1716

**ವಿಮಲಾ ಕುಮಾರಿ**

ಸರ್ಕಾರದ ಉಪ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ :** 2009–10ನೇ ಸಾಲಿನಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ಇವರ ವತಿಯಿಂದ ಪದವಿ ಪೂರ್ವ ಕಾಲೇಜುಗಳನ್ನು ಪ್ರಾರಂಭಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ:ಸಕಇ 33 ಮೊದೇಶಾ 2008, ದಿ:31.12.2008.

2. ಪತ್ರ ಸಂಖ್ಯೆ:ಕವಶಿಸಸ/ಶಿಕ್ಷಣ/ಸಿಆರ್–4/2008–09 ದಿ:25.3.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಪ್ರತಿ ಜಿಲ್ಲೆಗೆ ಒಂದು ಮೊರಾರ್ಜಿ ದೇಸಾಯಿ ವಸತಿ ಶಾಲೆಯಂತೆ ಒಟ್ಟು 29 ಪದವಿ ಪೂರ್ವ ಕಾಲೇಜುಗಳನ್ನು 2009–10ನೇ ಸಾಲಿನಿಂದ ಪ್ರಾರಂಭಿಸಲು ಮಂಜೂರಾತಿ ನೀಡಲಾಗಿತ್ತು. ನಂತರ ದಿನಾಂಕ:19.3.2009ರಂದು ಸರ್ಕಾರದ ಕಾರ್ಯದರ್ಶಿ ಸಮಾಜ ಕಲ್ಯಾಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಅಂತಹ ಪದವಿ ಪೂರ್ವ ಕೋರ್ಸ್ ಕಾಲೇಜುಗಳ ಸ್ಥಳ ಬದಲಾವಣೆ ಮಾಡಲು ತೀರ್ಮಾನಿಸಲಾಗಿದೆ. ದಿನಾಂಕ:31.12.2008ರ ಆದೇಶಕ್ಕೆ ತಿದ್ದುಪಡಿ ತರುವುದರ ಜೊತೆಗೆ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ಸೃಜಿಸಲು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಕಾರ್ಯ ನಿರ್ವಾಹಕ ನಿರ್ದೇಶಕರು, ಪ್ರಸ್ತಾವನೆ ಸಲ್ಲಿಸುತ್ತಾರೆ.

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಕಇ 33 ಮೊದೇಶಾ 2008, ಬೆಂಗಳೂರು, ದಿನಾಂಕ:7ನೇ ಜುಲೈ 2009**

ಸರ್ಕಾರಿ ಆದೇಶ ಸಂಖ್ಯೆ: ಸಕಇ 33 ಮೊದೇಶಾ 2008 ದಿನಾಂಕ:31.12.2008ನ್ನು ರದ್ದುಗೊಳಿಸುತ್ತಾ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ವತಿಯಿಂದ 2009–10ನೇ ಸಾಲಿನಲ್ಲಿ ಒಟ್ಟು 29 ಮೊರಾರ್ಜಿ ದೇಸಾಯಿ ಪದವಿ ಪೂರ್ವ ಕಾಲೇಜುಗಳನ್ನು ಈ ಕೆಳಗಿನಂತೆ ಪ್ರಾರಂಭಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

(1) ಪರಿಶಿಷ್ಟ ಜಾತಿಯ ಪದವಿ ಪೂರ್ವ ವಸತಿ ಕಾಲೇಜುಗಳು

| ಕ್ರ.ಸಂ. | ಜಿಲ್ಲೆ | ಕ್ರ.ಸಂ | ಜಿಲ್ಲೆ |
|---|---|---|---|
| 1 | ಬೆಂಗಳೂರು(ಗ್ರಾ) | 2 | ಚಿತ್ರದುರ್ಗ |
| 3 | ಕೋಲಾರ | 4 | ಮೈಸೂರು |
| 5 | ತುಮಕೂರು | 6 | ಚಾಮರಾಜನಗರ |

| | | | |
|---|---|---|---|
| 7 | ಹಾಸನ | 8 | ಗುಲ್ಬರ್ಗಾ |
| 9 | ಬಿಜಾಪುರ | 10 | ಚಿಕ್ಕಮಗಳೂರು |
| 11 | ದಾವಣಗೆರೆ | 12 | ಕೊಪ್ಪಳ |
| (2) ಪರಿಶಿಷ್ಟ ವರ್ಗದ ಪದವಿ ಪೂರ್ವ ವಸತಿ ಕಾಲೇಜುಗಳು | | | |
| 13 | ಬಳ್ಳಾರಿ | 14 | ರಾಯಚೂರು |
| (3) ಹಿಂದುಳಿದ ವರ್ಗದ ಪದವಿ ಪೂರ್ವ ವಸತಿ ಕಾಲೇಜುಗಳು | | | |
| 15 | ಬೆಂಗಳೂರು (ನ) | 16 | ಶಿವಮೊಗ್ಗ |
| 17 | ಧಾರವಾಡ | 18 | ಬಾಗಲಕೋಟೆ |
| 19 | ಹಾವೇರಿ | 20 | ಚಿಕ್ಕಬಳ್ಳಾಪುರ |
| 21 | ಮಂಡ್ಯ | 22 | ಉಡುಪಿ |
| 23 | ಕೊಡಗು | 24 | ಬೆಳಗಾಂ |
| 25 | ಉತ್ತರಕನ್ನಡ | 26 | ಗದಗ |
| (4) ಅಲ್ಪಸಂಖ್ಯಾತರ ಪದವಿ ಪೂರ್ವ ವಸತಿ ಕಾಲೇಜುಗಳು | | | |
| 27 | ರಾಮನಗರ | 28 | ದಕ್ಷಿಣ ಕನ್ನಡ |
| 29 | ಬೀದರ್ | | |

ಅಂತಹ ಪದವಿ ಪೂರ್ವ ಕಾಲೇಜುಗಳಲ್ಲಿ ಈ ಕೆಳಗಿನಂತೆ ಹುದ್ದೆಗಳನ್ನು ಸೃಜಿಸಲು ಸಹ ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ | ಹುದ್ದೆಯ ಪದನಾಮ | ವೇತನ ಶ್ರೇಣಿ (ರೂ) | ಪ್ರತಿ ಪದವಿ ಪೂರ್ವ ಕಾಲೇಜಿಗೆ ಮಂಜೂರಾದ ಹುದ್ದೆಗಳು | ಒಟ್ಟು ಹುದ್ದೆಗಳ ಸಂಖ್ಯೆ |
|---|---|---|---|---|
| 1 | ಪ್ರಾಂಶುಪಾಲರು | 15200–25650 | 01 | 29 |
| 2 | ಭಾಷಾ ಉಪನ್ಯಾಸಕರು | 11400–21600 | 02 | 58 |
| 3 | ಐಚ್ಛಿಕ ವಿಷಯ ಉಪನ್ಯಾಸಕರು | 11400–21600 | 05 | 145 |
| 4 | ನಿಲಯ ಪಾಲಕರು | 10000–18150 | 01 | 29 |
| 5 | ಪ್ರಥಮ ದರ್ಜೆ ಸಹಾಯಕರು (ಗಣಕ ಯಂತ್ರ ಜ್ಞಾನವುಳ್ಳವರು) | 7275–13350 | 01 | 29 |
| 6 | ಗ್ರೂಪ್–ಡಿ | 4800–7275 | 02 | 58 |
| 7 | ಅಡುಗೆಯವರು | 5200–8200 | 04 | 116 |
| 8 | ಅಡುಗೆ ಸಹಾಯಕರು | 4800–7275 | 03 | 87 |
| | ಒಟ್ಟು | | 19 | 551 |

ಆ ಸಂಬಂಧದ ವೆಚ್ಚವನ್ನು 2009–10ನೇ ಸಾಲಿನಲ್ಲಿ ಈ ಕೆಳಗಿನಂತೆ ಸಂಬಂಧಪಟ್ಟ ಲೆಕ್ಕ ಶೀರ್ಷಿಕೆಗಳ ಅಡಿ ಭರಿಸತಕ್ಕದ್ದು.

| ಕ್ರ.ಸಂ | ವರ್ಗ | ಲೆಕ್ಕ ಶೀರ್ಷಿಕೆ |
|---|---|---|
| 1 | ಪರಿಶಿಷ್ಟ ಜಾತಿ | 2225–01–277–0–62 |
| 2 | ಪರಿಶಿಷ್ಟ ವರ್ಗ | 2225–02–277–0–34 |
| 3 | ಹಿಂದುಳಿದ ವರ್ಗ | 2225–03–277–2–62 |
| 4 | ಅಲ್ಪಸಂಖ್ಯಾತರು | 2225–03–277–2–63 |

**ಷರತ್ತುಗಳು:**

(1) ಈ ಪದವಿ ಪೂರ್ವ ಕಾಲೇಜುಗಳಲ್ಲಿ 2009–10ನೇ ಸಾಲಿಗೆ 11ನೇ ತರಗತಿಯನ್ನು ಹಾಗೂ 2010–11ನೇ ಸಾಲಿನಲ್ಲಿ 12ನೇ ತರಗತಿಯನ್ನು (ಸಹಶಿಕ್ಷಣದಲ್ಲಿ) ಪ್ರಾರಂಭಿಸತಕ್ಕದ್ದು.

(2) ಈ ಪದವಿ ಪೂರ್ವ ವಸತಿ ಕಾಲೇಜುಗಳಲ್ಲಿ ಭಾಷಾ ವಿಷಯಗಳನ್ನು ಹೊರತುಪಡಿಸಿ ಉಳಿದ ವಿಷಯಗಳನ್ನು ಆಂಗ್ಲ ಮಾಧ್ಯಮದಲ್ಲಿ ನಡೆಸತಕ್ಕದ್ದು

(3) 2009–10ನೇ ಸಾಲಿನಲ್ಲಿ 11ನೇ ತರಗತಿಯನ್ನು ಎರಡು ವಿಷಯದ ಸಂಯೋಗದಲ್ಲಿ (combination) (ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ ಜೀವಶಾಸ್ತ್ರ ಮತ್ತು ಭೌತಶಾಸ್ತ್ರ ರಾಸಾಯನಶಾಸ್ತ್ರ, ಗಣಿತಶಾಸ್ತ್ರ, ಗಣಕಶಾಸ್ತ್ರ) ಪ್ರತಿ ಸಂಯೋಜನೆಗೆ 40 ವಿದ್ಯಾರ್ಥಿ ಪ್ರಮಾಣ ಮೀರದಂತೆ ದಾಖಲಾತಿ ಮಾಡಿಕೊಳ್ಳತಕ್ಕದ್ದು. ಈ ವಿದ್ಯಾರ್ಥಿಗಳ ಮಿತಿಯು 12ನೇ ತರಗತಿಗೂ ಅನ್ವಯವಾಗುತ್ತದೆ.

(4) ಯಾವುದೇ ವಿಷಯಗಳ ಸಂಯೋಗದಲ್ಲಿ (combination) ಕನಿಷ್ಠ 10 ವಿದ್ಯಾರ್ಥಿಗಳಿದ್ದು, ಗರಿಷ್ಠ ಪ್ರಮಾಣ 40ನ್ನು ಮೀರಬಾರದು.

(5) ಗಣಕ ವಿಜ್ಞಾನ ವಿಭಾಗದಲ್ಲಿ ಕನಿಷ್ಟ 10 ವಿದ್ಯಾರ್ಥಿಗಳಿಗೆ ಒಂದರಂತೆ (10:1) ಗಣಕ ಯಂತ್ರಗಳಿರಬೇಕು. 40 ವಿದ್ಯಾರ್ಥಿಗಳಿಗೆ 04 ಗಣಕ ಯಂತ್ರ, ಕೊಠಡಿ ಹಾಗೂ ಇತರೆ ಸೌಲಭ್ಯಗಳಿರಬೇಕು.

(6) ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಲ್ಲಿ ವಿವಿಧ ವರ್ಗದ ವಿದ್ಯಾರ್ಥಿಗಳ ಪ್ರವೇಶಾತಿಗಾಗಿ ಜಾರಿಯಲ್ಲಿರುವ ಮೀಸಲಾತಿ ಅನುಪಾತವು ಈ ಪದವಿ ಪೂರ್ವ ಕಾಲೇಜುಗಳಿಗೂ ಅನ್ವಯವಾಗುತ್ತದೆ.

(7) ಯಾವುದೇ ಪದವಿ ಪೂರ್ವ ಕೋರ್ಸಿಗೆ ನಿಗಧಿಪಡಿಸಿದ ಸೀಟುಗಳಲ್ಲಿ ಶೇಕಡ 50ರಷ್ಟನ್ನು ಹುಡುಗಿಯರಿಗೆ ಮತ್ತು ಉಳಿದ 50 ರಷ್ಟು ಹುಡುಗರಿಗೆ ಮೀಸಲಾಗಿಡತಕ್ಕದ್ದು. ಒಂದು ಪಕ್ಷ ಸಾಕಷ್ಟು ಸಂಖ್ಯೆಯಲ್ಲಿ ಹುಡುಗಿಯರು ಅಥವಾ ಹುಡುಗರು ಲಭ್ಯವಾಗದಿದ್ದಲ್ಲಿ ಅವರುಗಳ ಕೋಟಾವನ್ನು ಭರ್ತಿ ಮಾಡಲು ಆಂತರಿಕ ಬದಲಾವಣೆ ಮಾಡಿಕೊಳ್ಳತಕ್ಕದ್ದು.

(8) ಯಾವುದೇ ಜಿಲ್ಲೆಯ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶ ಪರೀಕ್ಷೆ ನಡೆಸಿ ಸಂಬಂಧಪಟ್ಟ ಜಿಲ್ಲೆಯಲ್ಲಿ ಪ್ರಾರಂಭಿಸುವ ಪದವಿ ಪೂರ್ವ ಕಾಲೇಜಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡತಕ್ಕದ್ದು. ಆದರೆ ಯಾವುದೇ ಜಿಲ್ಲೆಯಲ್ಲಿ ಆ ಜಿಲ್ಲೆಗೆ ಸೇರಿದ ಸಾಕಷ್ಟು ವಿದ್ಯಾರ್ಥಿಗಳು ಲಭ್ಯವಾಗದಿದ್ದಲ್ಲಿ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ ರವರು ನಡೆಸುವ ಪ್ರವೇಶ ಪರೀಕ್ಷೆಗೆ ಹಾಜರಾದ ಇತರೆ ಜಿಲ್ಲೆಗಳ ಅಭ್ಯರ್ಥಿಗಳನ್ನು ಪರಿಗಣಿಸಬಹುದು.

(9) ಆಯಾ ಸ್ನಾತಕೋತ್ತರ ಪದವಿಯಲ್ಲಿ ಕನಿಷ್ಟ 50 ರಷ್ಟು ಅಂಕಗಳನ್ನು ಪಡೆದ ಅಭ್ಯರ್ಥಿಗಳನ್ನು ಮಾತ್ರ ಹೊರ ಗುತ್ತಿಗೆ (out sourcing) ಆಧಾರದ ಮೇಲೆ ಉಪನ್ಯಾಸಕರ ಹುದ್ದೆಗಳಿಗೆ ನೇಮಿಸಿಕೊಳ್ಳತಕ್ಕದ್ದು. ಆದರೆ ಸಂಬಂಧಪಟ್ಟ ಸ್ನಾತಕೋತ್ತರ ಪದವಿಯ ಜೊತೆಗೆ ಬಿ.ಇ.ಡಿ. ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡತಕ್ಕದ್ದು.

(10) ಯಾವುದೇ ಸ್ನಾತಕೋತ್ತರ ಪದವಿಯಲ್ಲಿ (ಎಂ.ಎಸ್ಸಿ) ಕನಿಷ್ಟ 50 ರಷ್ಟು ಅಂಕಗಳನ್ನು ಪಡೆದಿದ್ದು ಕನಿಷ್ಟ 5 ವರ್ಷಗಳ ಬೋಧನಾ ಅನುಭವ ಹೊಂದಿರುವ ಅಭ್ಯರ್ಥಿಗಳನ್ನು ಹೊರ ಗುತ್ತಿಗೆ (out sourcing) ಆಧಾರದ ಮೇಲೆ ಕಾಲೇಜಿನ ಪ್ರಾಂಶುಪಾಲರ ಹುದ್ದೆಗೆ ನೇಮಿಸಿಕೊಳ್ಳತಕ್ಕದ್ದು. ಆದರೆ ಸಂಬಂಧಪಟ್ಟ ಸ್ನಾತಕೋತ್ತರ ಪದವಿಯ ಜೊತೆಗೆ ಬಿ.ಇ.ಡಿ. ವಿದ್ಯಾರ್ಹತೆ ಹೊಂದಿರುವ ಅಭ್ಯರ್ಥಿಗಳಿಗೆ ಆದ್ಯತೆ ನೀಡತಕ್ಕದ್ದು.

(11) ಈ ಉಪನ್ಯಾಸಕರ/ಪ್ರಾಂಶುಪಾಲರ ಹುದ್ದೆಗಳನ್ನು ನಿಯೋಜನೆ ಮೇಲೆ ಶಿಕ್ಷಣ ಇಲಾಖೆಯಿಂದ ಸಹ ತುಂಬಬಹುದು.

(12) ಈ ನೇಮಕಾತಿ ತಾತ್ಕಲಿಕ ವ್ಯವಸ್ಥೆಯಾಗಿದ್ದು ಈ ಪದವಿ ಪೂರ್ವ ಕಾಲೇಜುಗಳ ವಿವಿಧ ಬೋಧಕ ಹಾಗೂ ಬೋಧಕೇತರ ಹುದ್ದೆಗಳಿಗೆ ಪ್ರತ್ಯೇಕ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರೂಪಿಸುವವರೆಗೆ ಜಾರಿಯಲ್ಲಿರುತ್ತದೆ.

(13) ಪದವಿ ಪೂರ್ವ ಕಾಲೇಜುಗಳನ್ನು ಸಂಬಂಧಪಟ್ಟ ಜಿಲ್ಲಾ ಕೇಂದ್ರಗಳಲ್ಲಿ ತಾತ್ಕಾಲಿಕವಾಗಿ ಪ್ರಾರಂಭಿಸಿ, ನಂತರ ಅವುಗಳನ್ನು ಜಿಲ್ಲೆಯ ಸೂಕ್ತ ಸ್ಥಳಕ್ಕೆ ಸ್ಥಳಾಂತರಿಸಲು ಕ್ರಮಕೈಗೊಳ್ಳತಕ್ಕದ್ದು.

(14) ಅಂತಹ ಪದವಿ ಕೋರ್ಸುಗಳಿಗೆ ಸಂಬಂಧಿಸಿದಂತೆ ಯಾವುದೇ ಇತರೆ ವಿಷಯದಲ್ಲಿ ಸೂಚನೆಗಳು ಇರದೇ ಇದ್ದಲ್ಲಿ ಹಾಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ಜಾರಿಯಲ್ಲಿರುವ ಆದೇಶ ಮತ್ತು ನಿಯಮಗಳನ್ನು ಪಾಲಿಸತಕ್ಕದ್ದು.

(15) ಪದವಿ ಪೂರ್ವ ಕಾಲೇಜುಗಳಿಗೆ ಹೊಸ ಲೆಕ್ಕ ಶೀರ್ಷಿಕೆಗಳನ್ನು ನೀಡಿ ಅನುದಾನ ಬಿಡುಗಡೆಯಾಗುವವರೆಗೆ ಈಗಾಗಲೇ 2009–10ನೇ ಸಾಲಿನಲ್ಲಿ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳ ನಿರ್ವಹಣಾ ಲೆಕ್ಕ ಶೀರ್ಷಿಕೆಗಳಲ್ಲಿರುವ ಅನುದಾನವನ್ನು ಉಪಯೋಗಿಸಿಕೊಳ್ಳತಕ್ಕದ್ದು. ಹೆಚ್ಚುವರಿ ವೆಚ್ಚವನ್ನು ಆಯಾ ಇಲಾಖೆಗಳ ಆಯವ್ಯಯದಲ್ಲಿಯೇ ಭರಿಸಿಕೊಳ್ಳತಕ್ಕದ್ದು. ಅದಲ್ಲದೆ 2009–10ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಉಪಯೋಜನೆ ಅಡಿ ರಾಜ್ಯ ವಲಯದ ಅಡಿ ಲೆಕ್ಕ ಶೀರ್ಷಿಕೆ 2225–01–102–0–08 ರಲ್ಲಿ ಒದಗಿಸಿರುವ ರೂ. 1044.49 ಲಕ್ಷಗಳನ್ನು ಸಹ ವಿನಿಯೋಗಿಸಿಕೊಳ್ಳಬಹುದು.

(16) ಈ ಪದವಿ ಪೂರ್ವ ಕಾಲೇಜುಗಳಿಗೆ 2010–11ನೇ ಸಾಲಿಗೆ ಬೇಕಾಗುವ ಅನುದಾನ ಒದಗಿಸಿಕೊಳ್ಳಲು ಸಹ ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು.

ಇದಕ್ಕೆ ಶಿಕ್ಷಣ ಇಲಾಖೆ ಹಾಗೂ ಆರ್ಥಿಕ ಇಲಾಖೆಯ ಸಹಮತಿಯನ್ನು ಕ್ರಮವಾಗಿ ಟಿಪ್ಪಣಿ ಸಂ:ಶಿಇ 98 ಯೋಯೋಕ 2009 ದಿನಾಂಕ:25.5.2009 ಮತ್ತು ಆಇ 300 ವೆಚ್ಚ–3/2009 ದಿನಾಂಕ:23.6.2009 ರಲ್ಲಿ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1719

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ–I

ಸಮಾಜ ಕಲ್ಯಾಣ ಇಲಾಖೆ

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಆದೇಶ ಸಂಖ್ಯೆ:ಪಸಂಮೀ 07 ಪಅವಿ 2009, ಬೆಂಗಳೂರು, ದಿನಾಂಕ:28ನೇ ಜುಲೈ 2009**

**ವಿಷಯ :** ದೇವರಹಿಪ್ಪರಗಿ ಪಶುಆಸ್ಪತ್ರೆಯಲ್ಲಿನ ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಗಳ ಪೈಕಿ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಯನ್ನು ಇಂಡಿ ಪಶುಆಸ್ಪತ್ರೆಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ :** 1 ಆದೇಶ ಸಂಖ್ಯೆ:ಎಹೆಚ್‌ಎಫ್ 109 ವಿಎಹೆಚ್ 92, ದಿನಾಂಕ:17.3.1993.

2. ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ :ಆಪಸಂ/ಡಿವಿಡಿ–3/ವಿವ–35/2007–08(33), ದಿನಾಂಕ:30.12.2008 ಹಾಗೂ 12.6.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿ ಬಿಜಾಪುರ ಜಿಲ್ಲೆ ಸಿಂಧಗಿ ತಾಲ್ಲೂಕಿನ ದೇವರಹಿಪ್ಪರಗಿ ಪಶುಚಿಕಿತ್ಸಾಲಯವನ್ನು ಪಶುಆಸ್ಪತ್ರೆಯನ್ನಾಗಿ ಮೇಲ್ದರ್ಜೆಗೇರಿಸಿ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಯನ್ನು ಮಂಜೂರು ಮಾಡಿದೆ.

ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ದೇವರಹಿಪ್ಪರಗಿ ಈ ಹಿಂದೆ ಪಶುಚಿಕಿತ್ಸಾಲಯವಾಗಿದ್ದ ಸಂದರ್ಭದಲ್ಲಿ ಮತ್ತೊಂದು ಪಶುವೈದ್ಯಕೀಯ ಸಂಸ್ಥೆಯಿಂದ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆ ಸ್ಥಳಾಂತರಗೊಂಡಿರುವುದಾಗಿಯೂ, ಹುದ್ದೆ ಸ್ಥಳಾಂತರ ಹಾಗೂ ದಿನಾಂಕ:17.3.1993ರ ಆದೇಶದನ್ವಯ ಹೊಸ ಹುದ್ದೆಯ ಮಂಜೂರಾತಿಯಿಂದಾಗಿ ಪ್ರಸ್ತುತ ದೇವರಹಿಪ್ಪರಗಿ ಪಶುಆಸ್ಪತ್ರೆಯಲ್ಲಿ ಒಟ್ಟು ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಗಳಿರುತ್ತದೆಂದು ತಿಳಿಸಿರುತ್ತಾರೆ. ಈ ಬಗ್ಗೆ ಬಿಜಾಪುರ ಜಿಲ್ಲಾ ಪಂಚಾಯತ್ ಸಾಮಾನ್ಯ ಸಭೆಯಲ್ಲಿ ದೇವರಹಿಪ್ಪರಗಿ ಪಶುಆಸ್ಪತ್ರೆಯಲ್ಲಿರುವ ಎರಡು ಸೂಪರ್ ವೈಸರ್ ಹುದ್ದೆಗಳಲ್ಲಿ ಒಂದು ಹುದ್ದೆಯನ್ನು ಇಂಡಿ ಪಶುಆಸ್ಪತ್ರೆಗೆ ಸ್ಥಳಾಂತರಿಸಲು ಸರ್ವಾನುಮತದಿಂದ ಅನುಮೋದನೆ ನೀಡಿದೆ ಹಾಗೂ ದೇವರಹಿಪ್ಪರಗಿ ಪಶುಆಸ್ಪತ್ರೆಯಿಂದ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಯನ್ನು ಇಂಡಿ ಪಶುಆಸ್ಪತ್ರೆಗೆ ಸ್ಥಳಾಂತರಿಸುವುದರಿಂದ ದೇವರಹಿಪ್ಪರಗಿ ಪಶುಆಸ್ಪತ್ರೆಯ ದೈನಂದಿನ ಕಾರ್ಯಚಟುವಟಿಕೆಗಳಿಗೆ ತೊಂದರೆಯಾಗುವುದಿಲ್ಲವೆಂದು ತಿಳಿಸಿರುತ್ತಾರೆ. ಇಂಡಿ ಪಶುಆಸ್ಪತ್ರೆ ತಾಲ್ಲೂಕು ಮಟ್ಟದ ಆಸ್ಪತ್ರೆಯಾಗಿದ್ದು ಅಲ್ಲಿ ಕಾರ್ಯಾಬಾಹುಳ್ಯ ಹೆಚ್ಚಾಗಿದ್ದು ಅಲ್ಲಿ ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆ ಮಂಜೂರಾಗಿರುವುದಿಲ್ಲ. ಆದ್ದರಿಂದ ಜಿಲ್ಲಾ ಪಂಚಾಯತ್‌ನ ಅನುಮೋದನೆ ಹಾಗೂ ಬಿಜಾಪುರ ಜಿಲ್ಲಾ ಉಪನಿರ್ದೇಶಕರ ಕೋರಿಕೆಯಂತೆ ದೇವರಹಿಪ್ಪರಗಿ ಪಶುಆಸ್ಪತ್ರೆಯಲ್ಲಿರುವ ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಗಳಲ್ಲಿ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಯನ್ನು ಲೆಕ್ಕಶೀರ್ಷಿಕೆ 2403–00–101–0–71 (ಯೋಜನೆ) ಅಡಿ ಸಿಬ್ಬಂದಿ ಸಮೇತ ಇಂಡಿ ಪಶುಆಸ್ಪತ್ರೆಗೆ ಸ್ಥಳಾಂತರಿಸಲು ಆದೇಶ ಹೊರಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸಿಬ್ಬಂದಿ ಮಾದರಿ (Norms) ಅನ್ವಯ ಪಶುಆಸ್ಪತ್ರೆಯಲ್ಲಿ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆ ಇರಬೇಕಾಗುತ್ತದೆ. ಆ ಪ್ರಕಾರ ಇಂಡಿ ಪಶುಆಸ್ಪತ್ರೆಯಲ್ಲಿಯೂ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆ ಇರಬೇಕಾಗಿದ್ದು, ಸದರಿ ಆಸ್ಪತ್ರೆಗೆ ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆ ಮಂಜೂರಾಗಿರುವುದಿಲ್ಲ ಆದರೆ ಹೋಬಳಿ ಕೇಂದ್ರದಲ್ಲಿರುವ ದೇವರ ಹಿಪ್ಪರಗಿ ಪಶುಆಸ್ಪತ್ರೆಯಲ್ಲಿ ಪ್ರಸ್ತುತ ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆ ಇದ್ದು ಒಂದು ಹುದ್ದೆ ಹೆಚ್ಚುವರಿಯಾಗಿರುತ್ತದೆ. ಈ ಹೆಚ್ಚುವರಿ ಹುದ್ದೆಯನ್ನು ಇಂಡಿ ಪಶುಆಸ್ಪತ್ರೆಗೆ ಸಿಬ್ಬಂದಿ ಸಹಿತ ಸ್ಥಳಾಂತರಿಸುವುದರಿಂದ ದೇವರ ಹಿಪ್ಪರಗಿ ಪಶುಆಸ್ಪತ್ರೆಯ ದೈನಂದಿನ ಕಾರ್ಯಚಟುವಟಿಕೆಗಳಿಗೆ ತೊಂದರೆಯಾಗುವುದಿಲ್ಲ ಬದಲಾಗಿ ಕಾರ್ಯಬಾಹುಳ್ಯ ಹೆಚ್ಚಾಗಿರುವ ಇಂಡಿ ಪಶುಆಸ್ಪತ್ರೆಯ ದೈನಂದಿನ ಕಾರ್ಯಚಟುವಟಿಕೆಗಳಿಗೆ ಅನುಕೂಲವಾಗುವುದರ ಜೊತೆಗೆ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆ ನೀಡಿದಂತಾಗುತ್ತದೆ. ಸದರಿ ಹುದ್ದೆಗೆ ಲೆಕ್ಕಶೀರ್ಷಿಕೆ: 2403–00–101–0–71 ಅಡಿ ಅನುದಾನ ಲಭ್ಯವಿದ್ದು, ಸಿಬ್ಬಂದಿ ಮತ್ತು ಲೆಕ್ಕಶೀರ್ಷಿಕೆ ಸಮೇತ ಸ್ಥಳಾಂತರಿಸುವುದರಿಂದ ಸರ್ಕಾರಕ್ಕೆ ಆರ್ಥಿಕವಾಗಿ ಹೊರೆಯಾಗುವುದಿಲ್ಲ ಹಾಗೂ ಯಾವುದೇ ರೀತಿಯ ವೆಚ್ಚ ತಗಲುವುದಿಲ್ಲ. ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು

ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ ದೇವರಹಿಪ್ಪರಗಿ ಪಶುಆಸ್ಪತ್ರೆಯಲ್ಲಿರುವ ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಲೆಕ್ಕಶೀರ್ಷಿಕೆ:2403–00–101–0–71 ಅಡಿ ಕಾರ್ಯನಿರತ ಸಿಬ್ಬಂದಿಯೊಂದಿಗೆ ಇಂಡಿ ಪಶುಆಸ್ಪತ್ರೆಗೆ ಸ್ಥಳಾಂತರಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಬಿಜಾಪುರ ಜಿಲ್ಲೆ ಸಿಂಧಗಿ ತಾಲ್ಲೂಕಿನ ದೇವರಹಿಪ್ಪರಗಿ ಪಶುಆಸ್ಪತ್ರೆಯಲ್ಲಿರುವ ಎರಡು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಗಳ ಪೈಕಿ ಒಂದು ಪಶುವೈದ್ಯಕೀಯ ಮೇಲ್ವಿಚಾರಕರ ಹುದ್ದೆಯನ್ನು ಲೆಕ್ಕ ಶೀರ್ಷಿಕೆ:2403–00–101–0–71 (ಯೋಜನೆ) ಅಡಿ ಕಾರ್ಯನಿರತ ಸಿಬ್ಬಂದಿ ಸಮೇತ ಪಶುಆಸ್ಪತ್ರೆ, ಇಂಡಿ, ಇಂಡಿ ತಾಲ್ಲೂಕು ಬಿಜಾಪುರ ಜಿಲ್ಲೆ ಇಲ್ಲಿಗೆ ಸ್ಥಳಾಂತರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1825 **ಎಂ.ಪಿ. ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ–ಎ)

## ವಸತಿ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ:ವಇ 42 ಹೆಚ್ ಎಎಂ 1999 ದಿನಾಂಕ:10.5.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 22 ಹೆಚ್ಎಎಸ್ 2009, ಬೆಂಗಳೂರು, ದಿನಾಂಕ:1ನೇ ಆಗಸ್ಟ್ 2009**

ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ರಾಕೇಶ್, ಬಾಬು ಕಂಪೌಂಡ್, ಕೊಟ್ಟಾರ ಕ್ರಾಸ್ ರಸ್ತೆ, ಕಾಫಿಕಾಡ್ ಬಿಜೈ ಅಂಚೆ, ಮಂಗಳೂರು | ಪರಿಶಿಷ್ಟ ಜಾತಿ |
| 2 | ಶ್ರೀ ಶ್ರೀಧರ ಭಂಡಾರಿ, ಭಂಡಾರಿ ಮನೆ, ಅಂಚೆ, ಕಣ್ಣೂರು, ಮಂಗಳೂರು | ಹಿಂದುಳಿದ ವರ್ಗ |
| 3 | ಶ್ರೀಮತಿ ಫಾತೀಮಾ ಖಾನ್ ತಾಯಿ ಜಮೀಲಭಾನು, ಅಜಾದಿ ಕಂಪೌಂಡ್, ಕರ್ಬಲ ರಸ್ತೆ, ನಡುಪಳ್ಳಿ, ಹಿಂದೆ, ಕುದ್ರೋಳಿ ಮಂಗಳೂರು | ಅಲ್ಪಸಂಖ್ಯಾತರ (ಮಹಿಳೆ) |
| 4 | ಶ್ರೀ ದಿನಕರ ಶೆಟ್ಟಿ, ಭಂಡಾರಿ ಮನೆ, ಈಶ್ವರಸ್ಥಾನ ರಸ್ತೆ, ಕಂಬ್ಳ, ಮಂಗಳೂರು | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1882 **ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಆದೇಶ ಸಂಖ್ಯೆ:ಪಸಂಮೀ 342 ಪಸಸೇ 2009, ಬೆಂಗಳೂರು, ದಿನಾಂಕ: 3ನೇ ಆಗಸ್ಟ್, 2009**

**ವಿಷಯ :** ಡಾ: ಬಸವರಾಜ ಮಠಪತಿ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಸಿಂಧವಾಳ, ಬಳ್ಳಾರಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವ (Discharge) ಬಗ್ಗೆ.

**ಓದಲಾಗಿದೆ:** ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಆಪಸಂ/ಸಿಬ್ಬಂದಿ–2/ವಿವ/12/2007–08, ದಿನಾಂಕ:30.6.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಡಾ:ಬಸವರಾಜ ಮಠಪತಿ, ಪಶುವೈದ್ಯಾಧಿಕಾರಿ ಇವರು ದಿನಾಂಕ:18.8.2008ರಂದು ಪಶುಚಿಕಿತ್ಸಾಲಯ,

ಸಿಂಧವಾಳ, ಬಳ್ಳಾರಿ ತಾಲ್ಲೂಕು, ಬಳ್ಳಾರಿ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿ ನಂತರ ದಿನಾಂಕ:19.8.2008ರಿಂದಲೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಈ ಬಗ್ಗೆ ಸಹಾಯಕ ನಿರ್ದೇಶಕರು, ಪಶುಆಸ್ಪತ್ರೆ, ಬಳ್ಳಾರಿ ಇವರ ವರದಿಯನ್ನಾಧರಿಸಿ ಸದರಿ ಅಧಿಕಾರಿಗೆ ಕರ್ತವ್ಯಕ್ಕೆ ಹಾಜರಾಗಲು ಪತ್ರ ಬರೆದಿದ್ದು, ಅದು ಸ್ವೀಕೃತಗೊಳ್ಳದೇ ತಿರಸ್ಕೃತಗೊಂಡು ವಾಪಸ್ಸು ಬಂದಿರುವುದಾಗಿಯೂ ಹಾಗೂ ಸದರಿ ಅಧಿಕಾರಿ ಇದುವರೆಗೂ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ಉಪನಿರ್ದೇಶಕರು ಮಾಹಿತಿ ನೀಡಿರುವುದಾಗಿ ತಿಳಿಸಿರುತ್ತಾರೆ. ಬಳ್ಳಾರಿ ಜಿಲ್ಲೆಯಲ್ಲಿ ಪಶುವೈದ್ಯಾಧಿಕಾರಿಗಳ ತೀವ್ರ ಕೊರತೆಯಿರುವುದರಿಂದ ಇಲಾಖಾ ಚಟುವಟಿಕೆಗಳಿಗೆ ತೊಂದರೆಯಾಗುತ್ತಿದ್ದು ಇಂತಹ ಸನ್ನಿವೇಶದಲ್ಲಿ ಡಾ: ಬಸವರಾಜ ಮಠಪತಿ, ಪಶುವೈದ್ಯಾಧಿಕಾರಿ ದೀರ್ಘಕಾಲ ಅನಧಿಕೃತ ಗೈರುಹಾಜರಾಗಿರುವುದರಿಂದ ಹಾಗೂ ಪರೀಕ್ಷಾರ್ಥ ಅವಧಿಯಲ್ಲಿ ದುರ್ವರ್ತನೆ ತೋರಿ ಕರ್ತವ್ಯಲೋಪ ಎಸಗಿರುವುದರಿಂದ ಅವರನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 6(1)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲು (Discharge) ಕೋರಿರುತ್ತಾರೆ.

ಡಾ: ಬಸವರಾಜ ಮಠಪತಿ, ಪಶುವೈದ್ಯಾಧಿಕಾರಿ ಇವರು ಕರ್ತವ್ಯಕ್ಕೆ ಹಾಜರಾದ ಮರುದಿನದಿಂದಲೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕಛೇರಿಯ ದೈನಂದಿನ ಕಾರ್ಯಚಟುವಟಿಕೆಗಳಿಗೆ ತೊಂದರೆ ಉಂಟು ಮಾಡಿರುತ್ತಾರೆ. ಈ ಬಗ್ಗೆ ಕರ್ತವ್ಯಕ್ಕೆ ಹಾಜರಾಗುವಂತೆ ಬಳ್ಳಾರಿ ಜಿಲ್ಲಾ ಉಪನಿರ್ದೇಶಕರು ನೋಟೀಸ್ ಜಾರಿಗೊಳಿಸಿದರೂ ನೋಟೀಸಿಗೆ ಸ್ಪಂದಿಸಿರುವುದಿಲ್ಲ ಹಾಗೂ ಕರ್ತವ್ಯಕ್ಕೂ ಹಾಜರಾಗಿರುವುದಿಲ್ಲ. ಈ ರೀತಿ ಪರೀಕ್ಷಾರ್ಥ ಅವಧಿಯಲ್ಲಿಯೇ ಅನಧಿಕೃತ ಗೈರುಹಾಜರಾಗಿ ಕರ್ತವ್ಯಲೋಪ ಎಸಗಿರುವುದರ ಜೊತೆಗೆ ದುರ್ವರ್ತನೆ ತೋರಿರುವುದು ಅವರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯುವ ಆಸಕ್ತಿ ಇಲ್ಲದಿರುವುದಾಗಿ ತೋರಿಸುತ್ತದೆ. ಇದರಿಂದಾಗಿ ಡಾ: ಬಸವರಾಜ ಮಠಪತಿ, ಪಶುವೈದ್ಯಾಧಿಕಾರಿ ಇವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಡಾ:ಬಸವರಾಜ ಮಠಪತಿ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಸಿಂಧವಾಳ ಬಳ್ಳಾರಿ ಜಿಲ್ಲೆ ಇವರು ಕರ್ತವ್ಯಕ್ಕೆ ಹಾಜರಾದ ಮರುದಿನದಿಂದಲೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಹಾಗೂ ಪರೀಕ್ಷಾರ್ಥ ಅವಧಿಯಲ್ಲಿ ದುರ್ವರ್ತನೆ ತೋರಿ ಕರ್ತವ್ಯಲೋಪ ಎಸಗಿರುವುದು ದೃಢಪಟ್ಟಿರುವುದರಿಂದ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ರವರ ಶಿಫಾರಸ್ಸಿನಂತೆ ಡಾ: ಬಸವರಾಜ ಮಠಪತಿ, ಪಶುವೈದ್ಯಾಧಿಕಾರಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು, 1977ರ ನಿಯಮ 6(1)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಿ (Discharge) ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1929

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ–ಎ)

**ಆದೇಶ ಸಂಖ್ಯೆ:ಪಸಂಮೀ 239 ಪಸಸೇ 2008, ಬೆಂಗಳೂರು, ದಿನಾಂಕ: 10ನೇ ಆಗಸ್ಟ್, 2009**

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು ತೂಬುಗೆರೆ ಹೋಬಳಿಯ ಮೆಳೆಕೋಟೆ ಕೃತಕ ಗರ್ಭಧಾರಣಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಮೇಲ್ದರ್ಜೆಗೇರಿಸುವಿಕೆ.

**ಓದಲಾಗಿದೆ:** ಪತ್ರ ಸಂಖ್ಯೆ:ಆಪಸಂ/ಡಿವಿಡಿ–3/ವಿವ–21/2008–09, ದಿನಾಂಕ:8–9–2008, 31.10.2008, 28.2.2009 ಹಾಗೂ 5.5.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯ ಅಧ್ಯಕ್ಷರು ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು ತೂಬುಗೆರೆ ಹೋಬಳಿಯ ಮೆಳೆಕೋಟೆ ಕೃತಕ ಗರ್ಭಧಾರಣಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಮೇಲ್ದರ್ಜೆಗೇರಿಸುವಂತೆ ಕೋರಿದ್ದನ್ನು ಅನುಸರಿಸಿ ಪರಿಶೀಲಿಸಲಾಗಿ 2003ರ ಜಾನುವಾರು ಗಣತಿಯಂತೆ ಮೆಳೆಕೋಟೆ ಹಾಗೂ ಸುತ್ತಮುತ್ತಲಿನ ಗ್ರಾಮಗಳಾದ ಮಾರಹಳ್ಳಿ, ಭೂಮೇನಹಳ್ಳಿ, ದೊಡ್ಡರಾಯಪ್ಪನಹಳ್ಳಿ ಚಿಕ್ಕರಾಯಪ್ಪನಹಳ್ಳಿ, ಚಿಕ್ಕರಾಯಪ್ಪನಹಳ್ಳಿ, ಗಂಟಿಗಾನಹಳ್ಳಿ ಮತ್ತು ಚೋಗೊಂಡನಹಳ್ಳಿ ಗ್ರಾಮಗಳು 2435 ಕುಕ್ಕುಟ ಹಾಗೂ 5422 ಜಾನುವಾರುಗಳು ಹೊಂದಿದ್ದು, ತೂಬುಗೆರೆ ಹೋಬಳಿಯಲ್ಲಿ ಒಟ್ಟು 75, 245 ಜಾನುವಾರುಗಳಿದ್ದು, ಅಲ್ಲಿ ಕೃತಕ ಗರ್ಭಧಾರಣಾ ಕೇಂದ್ರ ಕಾರ್ಯನಿರ್ವಹಿಸುತ್ತಿದ್ದು ಪಶುಚಿಕಿತ್ಸಾಲಯ ಇರುವುದಿಲ್ಲ ಎನ್ನುತ್ತ, ಮೆಳೆಕೋಟೆ ಗ್ರಾಮ ಹಾಗೂ ಸುತ್ತಮುತ್ತಲಿನ ಗ್ರಾಮಗಳಲ್ಲಿ ಹೈನುಗಾರಿಕೆ ಪ್ರಮುಖ ಕಸುಬಾಗಿದ್ದು ಹೆಚ್ಚಿನ ಸಂಖ್ಯೆಯಲ್ಲಿ ಮಿಶ್ರತಳಿ ರಾಸುಗಳಿರುವುದರಿಂದ ಸದರಿ ಕೃತಕ ಗರ್ಭಧಾರಣಾ ಕೇಂದ್ರವನ್ನು

ಪಶುಚಿಕಿತ್ಸಾಲಯವನ್ನಾಗಿ ಮೇಲ್ದರ್ಜೆಗೇರಿಸಿದಲ್ಲಿ ಹೆಚ್ಚಿನ ಮಟ್ಟದಲ್ಲಿ ಪಶುವೈದ್ಯಕೀಯ ಸೇವೆಯನ್ನು ನೀಡಬಹುದಾಗಿರುತ್ತದೆಂದು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಸಂಸ್ಥೆ ಪಶುಚಿಕಿತ್ಸಾಲಯವಾಗಿ ಉನ್ನತೀಕರಣಗೊಳ್ಳಲು ಎಲ್ಲಾ ಅರ್ಹತೆ ಹೊಂದಿರುತ್ತದೆಂದು ಮಾಹಿತಿ ನೀಡಿರುತ್ತಾರೆ. ಸದರಿ ಉನ್ನತೀಕರಣಕ್ಕೆ ಒಟ್ಟು ರೂ. 2.60 ಲಕ್ಷ ವಾರ್ಷಿಕ ವಂಟನ ಅವಶ್ಯಕವಾಗಿದ್ದು, ಸದರಿ ಅನುದಾನವನ್ನು ಲೆಕ್ಕಶೀರ್ಷಿಕೆ:2403–00–101–0–71 (ಯೋಜನೆ) (ತಾಲ್ಲೂಕು ಪಂಚಾಯತ್ ಕಾರ್ಯಕ್ರಮ)ಅಡಿ ಭರಿಸಲು ಮಂಜೂರಾತಿ ನೀಡುವಂತೆ ಹಾಗೂ ಒಂದು ಪಶುವೈದ್ಯಾಧಿಕಾರಿ ಹಾಗೂ ಒಂದು ಗ್ರೂಪ್–ಡಿ ಹುದ್ದೆಗಳನ್ನು ಹೊಸದಾಗಿ ಸೃಜಿಸಿ ಮೇಳೆಕೋಟೆ ಕೃತಕ ಗರ್ಭಧಾರಣಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಮೇಲ್ದರ್ಜೆಗೇರಿಸಲು ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ತೂಬುಗೆರೆ ಹೋಬಳಿಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜಾನುವಾರುಗಳಿದ್ದು, ಹೈನುಗಾರಿಕೆ ಪ್ರಮುಖ ಕಸುಬಾಗಿರುತ್ತದೆ ಹಾಗೂ ಅಲ್ಲಿ ಹೆಚ್ಚಿನ ಸಂಖ್ಯೆಯ ಮಿಶ್ರತಳಿ ರಾಸುಗಳಿರುತ್ತದೆ. ಮೆಳೆಕೋಟೆ ಕೃತಕ ಗರ್ಭಧಾರಣಾ ಕೇಂದ್ರವು ಪಶುಚಿಕಿತ್ಸಾಲಯವಾಗಿ ಉನ್ನತೀಕರಣಗೊಳ್ಳಲು ಎಲ್ಲಾ ಅರ್ಹತೆ ಹೊಂದಿದ್ದು., ಹೋಬಳಿಯ 6 ಗ್ರಾಮಗಳಿಗೆ ಕೇಂದ್ರ ಸ್ಥಾನದಲ್ಲಿದೆ. ಅಲ್ಲಿರುವ ಕೃತಕ ಗರ್ಭಧಾರಣಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಉನ್ನತೀಕರಿಸಿದರೆ ಪಶುವೈದ್ಯಾಧಿಕಾರಿ ಹುದ್ದೆ ದೊರೆಯುವುದರಿಂದ ಜಾನುವಾರುಗಳ ಚಿಕಿತ್ಸೆಗೆ, ಮಿಶ್ರತಳಿ ರಾಸುಗಳ ಅಭಿವೃದ್ಧಿಗೆ ಹಾಗೂ ಹೈನುಗಾರಿಕೆ ಚಟುವಟಿಕೆಗಳಿಗೆ ಅನುಕೂಲವಾಗುವುದರಿಂದ ತೂಬುಗೆರೆ ಹೋಬಳಿಯ ಮೆಳೆಕೋಟೆ ಕೃತಕ ಗರ್ಭಧಾರಣಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರ ಮಿಶ್ರತಳಿ ರಾಸುಗಳ ಅಭಿವೃದ್ಧಿ, ಹೈನುಗಾರಿಕೆ ಚಟುವಟಿಕೆಗಳಿಗೆ ನೆರವು ನೀಡಲು ಮತ್ತು ಜಾನುವಾರುಗಳ ಚಿಕಿತ್ಸೆ ಹಾಗೂ ರೈತಾಪಿ ವರ್ಗದವರಿಗೆ ಹೆಚ್ಚಿನ ಮಟ್ಟದ ಪಶುವೈದ್ಯಕೀಯ ಸೇವೆಗಳನ್ನು ಒದಗಿಸುವ ಸಲುವಾಗಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ತೂಬುಗೆರೆ ಹೋಬಳಿಯ ಮೆಳೆಕೋಟೆ ಕೃತಕ ಗರ್ಭಧಾರಣಾ ಕೇಂದ್ರವನ್ನು ಪಶುಚಿಕಿತ್ಸಾಲಯವನ್ನಾಗಿ ಉನ್ನತೀಕರಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಆಇ 517 ವೆ. 4/2008, ದಿನಾಂಕ:26.6.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1930

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ–ಎ)

**ಆದೇಶ ಸಂಖ್ಯೆ:ಪಸಂಮೀ 151 ಪಸಸೇ 2008, ಬೆಂಗಳೂರು, ದಿನಾಂಕ: 14ನೇ ಆಗಸ್ಟ್, 2009**

**ವಿಷಯ :** ಹೊಸಪೇಟೆ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆಯ ಸಹಾಯಕ ನಿರ್ದೇಶಕರ ಹುದ್ದೆ ರದ್ದಾದ ಪ್ರಯುಕ್ತ ಬಳ್ಳಾರಿ ಜಿಲ್ಲೆಯ ವಿವಿಧ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿರುವ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರಗಳನ್ನು ಸ್ಥಳಾಂತರಿಸುವಿಕೆ.

**ಓದಲಾಗಿದೆ:** ಪತ್ರ ಸಂಖ್ಯೆ:ಆಪಸಂ/ಡಿವಿಡಿ–3/ಕುರಿ ನಿಗಮ/2006–07, ದಿನಾಂಕ:19.5.2008, 19.5.2009 ಹಾಗೂ 17.6.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆ, ಹೊಸಪೇಟೆ ಇಲ್ಲಿನ ಸಹಾಯಕ ನಿರ್ದೇಶಕರ ಹುದ್ದೆ ರದ್ದಾದ ಪ್ರಯುಕ್ತ, ಸದರಿ ಯೋಜನೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಹೊಸಪೇಟೆ, ಮರಿಯಮ್ಮನಹಳ್ಳಿ, ತೋರಣಗಲ್ ಹಾಗೂ ಕುಡತಿನಿಯಲ್ಲಿರುವ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರಗಳನ್ನು ಕಾರ್ಯನಿರತ ಹುದ್ದೆಗಳೊಂದಿಗೆ ಸ್ಥಳಾಂತರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಸದರಿ ಕುರಿ ವಿಸ್ತರಣಾ ಕೇಂದ್ರಗಳನ್ನು ಸ್ಥಳಾಂತರಿಸುವುದರಿಂದ ಪಶುವೈದ್ಯಕೀಯ ಸಂಸ್ಥೆಗಳಿಲ್ಲದ ಗ್ರಾಮಗಳಿಗೆ ಪಶುವೈದ್ಯಕೀಯ ಸೇವೆಯನ್ನು ಒದಗಿಸಬಹುದಾಗಿದ್ದು, ಇದರಿಂದ ಸರ್ಕಾರಕ್ಕೆ ಯಾವುದೇ ಹೆಚ್ಚಿನ ಆರ್ಥಿಕ ಹೊರೆ ಬೀಳುವುದಿಲ್ಲವೆಂದು ತಿಳಿಸಿರುತ್ತಾರೆ ಹಾಗೂ ಕೇಂದ್ರಗಳ ಸ್ಥಳಾಂತರ ಸಂಬಂಧ ಜಿಲ್ಲಾ ಪಂಚಾಯತ್ ಠರಾವು ಹಾಗೂ ಸ್ಥಳೀಯ ಶಾಸಕರ ಅಭಿಪ್ರಾಯವನ್ನು ಸಹ ಕಳುಹಿಸಿರುತ್ತಾರೆ.

ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರಗಳನ್ನು ಸ್ಥಳಾಂತರಿಸುವ ಸಂಬಂಧ ಸ್ಥಳೀಯ ಶಾಸಕರು ಅಭಿಪ್ರಾಯ ಕೋರಲಾಗಿ ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಕುಡಿತಿನಿ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರವನ್ನು

ಬಳ್ಳಾರಿ ತಾಲ್ಲೂಕಿನ ಹರಗಿನಡೋಣಿ ಗ್ರಾಮಕ್ಕೆ ಸ್ಥಳಾಂತರಿಸುವಂತೆ ಕೋರಿರುತ್ತಾರೆ. ಮಾನ್ಯ ಸಂಡೂರು ವಿಧಾನಸಭಾ ಕ್ಷೇತ್ರದ ಶಾಸಕರು ತೋರಣಗಲ್ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರವನ್ನು ಸಂಡೂರು ತಾಲ್ಲೂಕಿನ ತಾರಾನಗರ ಗ್ರಾಮಕ್ಕೆ ಸ್ಥಳಾಂತರಿಸವಂತೆ ಕೋರಿರುತ್ತಾರೆ. ಮಾನ್ಯ ವಿಜಯನಗರ ಕ್ಷೇತ್ರದ ಶಾಸಕರು ಹೊಸಪೇಟೆ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರವನ್ನು ಹೊಸಪೇಟೆ ತಾಲ್ಲೂಕಿನ ಹೊಸೂರು ಗ್ರಾಮಕ್ಕೆ ಸ್ಥಳಾಂತರಿಸುವಂತೆ ಕೋರಿರುತ್ತಾರೆ ಹಾಗೂ ಮಾನ್ಯ ಹಗರಿಬೊಮ್ಮನಹಳ್ಳಿ ವಿಧಾನಸಭಾ ಕ್ಷೇತ್ರದ ಶಾಸಕರು, ಮರಿಯಮ್ಮನಹಳ್ಳಿ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರವನ್ನು ಹೊಸಪೇಟೆ ತಾಲ್ಲೂಕಿನ ಡಣಾಯಕನಕೆರೆ ಗ್ರಾಮಕ್ಕೆ ಸ್ಥಳಾಂತರಿಸುವಂತೆ ಕೋರಿರುತ್ತಾರೆ ಈ ಬಗ್ಗೆ ಬಳ್ಳಾರಿ ಜಿಲ್ಲಾ ಪಂಚಾಯತ್‌ನ ಕೃಷಿ ಮತ್ತು ಕೈಗಾರಿಕಾ ಸ್ಥಾಯಿ ಸಮಿತಿ ಸಭೆಯಲ್ಲಿ ಮಾನ್ಯ ಶಾಸಕರುಗಳ ಅಭಿಪ್ರಾಯದಂತೆ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರಗಳನ್ನು ಸ್ಥಳಾಂತರಿಸಲು ಅನುಮೋದನೆ ನೀಡಿರುತ್ತಾರೆ.

ಡಾ: :ಡಿ.ಎಂ. ನಂಜುಂಡಪ್ಪನವರ ಪ್ರಾದೇಶಿಕ ಅಸಮತೋಲನಾ ವರದಿಯನ್ವಯ ಬಳ್ಳಾರಿ ಜಿಲ್ಲೆ ಹಿಂದುಳಿದ ಜಿಲ್ಲೆಯಾಗಿರುತ್ತದೆ. ಹೊಸಪೇಟೆ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆಯಲ್ಲಿನ ಸಹಾಯಕ ನಿರ್ದೇಶಕರ ಹುದ್ದೆ ರದ್ದಾದ ಕಾರಣ ಅಲ್ಲಿ ಹೆಚ್ಚಿನ ಕಾರ್ಯಒತ್ತಡ ಇರುವುದಿಲ್ಲ. ಸದರಿ ಯೋಜನೆಯಲ್ಲಿನ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರಗಳನ್ನು ಹುದ್ದೆಗಳೊಂದಿಗೆ ಸ್ಥಳಾಂತರಿಸುವುದರಿಂದ ಪಶುವೈದ್ಯಕೀಯ ಸಂಸ್ಥೆಗಳಿಲ್ಲದ ಗ್ರಾಮಗಳಿಗೆ ಪಶುವೈದ್ಯಕೀಯ ಸೇವೆಯನ್ನು ಒದಗಿಸಬಹುದಾಗಿದೆ. ಇದರಿಂದಾಗಿ ಗ್ರಾಮೀಣ ಪ್ರದೇಶದ ರೈತಾಪಿ ವರ್ಗಕ್ಕೆ ಹಾಗೂ ಜಾನುವಾರುಗಳ ಚಿಕಿತ್ಸೆಗಾಗಿ ಅನುಕೂಲವಾಗುವುದಲ್ಲದೇ ಕುರಿ ತಳಿ ಸಂವರ್ಧನೆ/ಸಂರಕ್ಷಣೆಗೂ ಅನುಕೂಲವಾಗುತ್ತದೆ. ಉದ್ದೇಶಿತ ಸ್ಥಳಾಂತರದಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆ ಬೀಳುವುದಿಲ್ಲ. ಈ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ ಸ್ಥಳೀಯ ಶಾಸಕರ ಅಭಿಪ್ರಾಯ ಹಾಗೂ ಜಿಲ್ಲಾ ಪಂಚಾಯತ್ ನ ಅನುಮೋದನೆಯಂತೆ, ಹೊಸಪೇಟೆ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆಯ ಸಹಾಯಕ ನಿರ್ದೇಶಕರ ಹುದ್ದೆ ರದ್ದಾಗಿರುವುದರಿಂದ ಸದರಿ ಯೋಜನೆಯ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರಗಳನ್ನು ಮಂಜೂರಾದ ಹುದ್ದೆಗಳೊಂದಿಗೆ ಅದೇ ಜಿಲ್ಲೆಯ ಪಶುವೈದ್ಯಕೀಯ ಸಂಸ್ಥೆಗಳಿಲ್ಲದ ಹಾಗೂ ಅವಶ್ಯಕತೆ ಇರುವ ಗ್ರಾಮಗಳಿಗೆ ಸ್ಥಳಾಂತರಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಹೊಸಪೇಟೆ ಕುರಿ ಮತ್ತು ಉಣ್ಣೆ ಅಭಿವೃದ್ಧಿ ಯೋಜನೆಯಲ್ಲಿನ ಸಹಾಯಕ ನಿರ್ದೇಶಕರ ಹುದ್ದೆ ರದ್ದಾದ ಪ್ರಯುಕ್ತ ಸದರಿ ಯೋಜನೆ ಅಡಿ ಕಾರ್ಯನಿರ್ವಹಿಸುತ್ತಿರುವ ಕೆಳಕಂಡ ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರಗಳನ್ನು ಅಂಕಣ–3ರಲ್ಲಿ ನಮೂದಿಸಿರುವ ಸ್ಥಳಕ್ಕೆ ಅಂಕಣ–4ರಲ್ಲಿ ನಮೂದಿಸಿರುವ ಹುದ್ದೆಗಳೊಂದಿಗೆ ಸ್ಥಳಾಂತರಿಸಿ ಆದೇಶಿಸಿದೆ.

| ಕ್ರ.ಸಂ | ಕೇಂದ್ರ ಹಾಗೂ ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸ್ಥಳ | ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರಗಳನ್ನು ಸ್ಥಳಾಂತರಿಸಿದ ಸ್ಥಳ | ಸ್ಥಳಾಂತರಿಸಿದ ಹುದ್ದೆ ಹೆಸರು ಹಾಗೂ ಹುದ್ದೆಗಳ ಸಂಖ್ಯೆ |
|---|---|---|---|
| 1 | ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರ ಹೊಸಪೇಟೆ ಬಳ್ಳಾರಿ ಜಿಲ್ಲೆ | ಹೊಸೂರು ಹೊಸಪೇಟೆ ತಾಲ್ಲೂಕು ಬಳ್ಳಾರಿ ಜಿಲ್ಲೆ | ಪಶುವೈದ್ಯಕೀಯ ಪರೀಕ್ಷಕ– 01<br>ಡಿ– ದರ್ಜೆ –02 |
| 2 | ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರ, ಮರಿಯಮ್ಮನಹಳ್ಳಿ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ | ಡಣಾನಾಯಕನಕೆರೆ ಹೊಸಪೇಟೆ ತಾಲ್ಲೂಕು ಬಳ್ಳಾರಿ ಜಿಲ್ಲೆ | ಪಶುವೈದ್ಯಕೀಯ ಪರೀಕ್ಷಕ– 01<br>ಡಿ– ದರ್ಜೆ –02 |
| 3 | ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರ ತೋರಣಗಲ್, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ | ತಾರಾನಗರ, ಸಂಡೂರು ತಾಲ್ಲೂಕು ಬಳ್ಳಾರಿ ಜಿಲ್ಲೆ | ಪಶುವೈದ್ಯಕೀಯ ಪರೀಕ್ಷಕ– 01<br>ಡಿ– ದರ್ಜೆ –02 |
| 4 | ಕುರಿ ಮತ್ತು ಉಣ್ಣೆ ವಿಸ್ತರಣಾ ಕೇಂದ್ರ ಕುಡತಿನಿ ಬಳ್ಳಾರಿ ಜಿಲ್ಲೆ | ಹರಗಿನಡೋಣಿ, ಬಳ್ಳಾರಿ ತಾಲ್ಲೂಕು ಬಳ್ಳಾರಿ ಜಿಲ್ಲೆ | ಪಶುವೈದ್ಯಕೀಯ ಪರೀಕ್ಷಕ– 01<br>ಡಿ– ದರ್ಜೆ –02 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1963

**ಎಂ.ಪಿ. ನಾಗರಾಜ**

ಪೀಠಾಧಿಕಾರಿ–2, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ–ಎ)

**ವಸತಿ ಸಚಿವಾಲಯ**

**ವಿಷಯ :** ನಿರ್ಮಲಜ್ಯೋತಿ 2ನೇ ಹಂತದ ಕಾಮಗಾರಿಗಳಿಗೆ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1 ಸರ್ಕಾರದ ಆದೇಶ ಸಂಖ್ಯೆ:ವಇ 26 ಕೊಮಂಲೆ 07, ಬೆಂಗಳೂರು, ದಿನಾಂಕ:7.1.2008.
2. ಸರ್ಕಾರದ ಆದೇಶ ಸಂಖ್ಯೆ:ವಇ 26 ಕೊಮಂಲೆ 07, ಬೆಂಗಳೂರು, ದಿನಾಂಕ:29.3.2008.
3. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಕೊನಿಮ/ಲೆಪಶಾ/ಅನುದಾನ: ನಿಜ್ಯೋ:2:2008–09, ದಿನಾಂಕ:28.8.2008.
4. ಸರ್ಕಾರದ ಆದೇಶ ಸಂಖ್ಯೆ: ವಇ 26 ಕೊಮಂಲೆ 07, ಬೆಂಗಳೂರು, ದಿನಾಂಕ:4.9.2008
5. ಸರ್ಕಾರದ ಆದೇಶ ಸಂಖ್ಯೆ: ವಇ 26 ಕೊಮಂಲೆ 07, ಬೆಂಗಳೂರು, ದಿನಾಂಕ:15.1.2009
6. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಕೊನಿಮ/ಲೆಪಶಾ/ಅನಧಾನ:ನಿಜ್ಯೋ:2:2009–10/114, ದಿನಾಂಕ:20.5.2009

**ಪ್ರಸ್ತಾವನೆ:**

ನಿರ್ಮಲ ಜ್ಯೋತಿ ಯೋಜನೆಯನ್ನು ರೂ. 40.00 ಕೋಟಿಗಳಿಗೆ ಸೀಮಿತಗೊಳಿಸಿ ಸ್ಥಗಿತಗೊಳಿಸಬೇಕೆಂಬ ಷರತ್ತಿನೊಂದಿಗೆ ರೂ. 36.39 ಕೋಟಿ ಹಾಗೂ ಆನಂತರದ ಆಯುಕ್ತರ ಕೋರಿಕೆ /ಪ್ರಸ್ತಾವನೆ ಮೇರೆಗೆ ರೂ. 3.61 ಕೋಟಿ ಒಟ್ಟು 40.00 ಕೋಟಿ ಹಣವನ್ನು ಮೇಲೆ ಓದಲಾದ ಕ್ರಮ ಸಂಖ್ಯೆ(1) ಮತ್ತು (2)ರ ಆದೇಶದನ್ವಯ ಮಂಡಳಿಗೆ ಬಿಡುಗಡೆ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಆಯುಕ್ತರು 2008–09ನೇ ಸಾಲಿನ ಆಯವ್ಯಯದಲ್ಲಿ ನಿರ್ಮಲ ಜ್ಯೋತಿ ಕಾಮಗಾರಿಗಳಿಗೆ ರೂ. 2000.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಅಲ್ಲದೆ ಕಾಮಗಾರಿಗಳು ಪ್ರಗತಿಯಲ್ಲಿರುವುದರಿಂದ ರೂ. 1000.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಸಲ್ಲಿಸಿದ ಪ್ರಸ್ತಾವನೆಗೆ, ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ 1ನೇ ಮತ್ತು 2ನೇ ತ್ರೈಮಾಸಿಕ ಸೇರಿ ಒಟ್ಟು 1000.00 ಲಕ್ಷಗಳ ಅನುದಾನವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ ಅವರ ಆರ್ಥಿಕ ಅಧಿಕಾರ ವ್ಯಾಪ್ತಿಯಲ್ಲಿ ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (5)ರನ್ವಯ 3ನೇ ಮತ್ತು 4ನೇ ತ್ರೈಮಾಸಿಕ ಕಂತಾಗಿ ಒಟ್ಟು ರೂ. 1000.00 ಲಕ್ಷಗಳನ್ನು ಆರ್ಥಿಕ ಇಲಾಖೆಯ ಸಹಮತಿಯೊಂದಿಗೆ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಮಂಡಳಿಯ ಆಯುಕ್ತರು ಈಗಾಗಲೇ ಸದರಿ ಯೋಜನೆಯ ಕೆಲವು ನಗರಗಳಲ್ಲಿ ಕಾಮಗಾರಿಗಳು ಈಗಾಗಲೇ ಪೂರ್ಣಗೊಂಡಿದ್ದು, ಇನ್ನು ಕೆಲವು ನಗರಗಳಲ್ಲಿ ಕಾಮಗಾರಿಗಳು ಪೂರ್ಣಗೊಳ್ಳುವ ಹಂತದಲ್ಲಿದ್ದು, ಪೂರ್ಣಗೊಂಡಿರುವ ಕಾಮಗಾರಿಗಳ ಬಿಲ್ಲುಗಳನ್ನು ಪಾವತಿಸಲು ಹಾಗೂ ನಿರ್ಮಲ ಜ್ಯೋತಿ ಯೋಜನೆ ಹಂತ–2 ರ ಕಾಮಗಾರಿಗಳನ್ನು ಮೇ–2009ರೊಳಗೆ ಭೌತಿಕವಾಗಿ ಪೂರ್ಣಗೊಳಿಸಿ ಅಂತಿಮ ಬಿಲ್ಲುಗಳನ್ನು ಪಾವತಿಸುವ ಸಲುವಾಗಿ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಮೊತ್ತ ರೂ. 1100 ಲಕ್ಷಗಳನ್ನು ಮಂಡಳಿಗೆ ಲೆಕ್ಕಶೀರ್ಷಿಕೆ 2217–04–191–2–02 ಕೊಳಚೆ ಸುಧಾರಣೆಯಡಿಯಲ್ಲಿ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.,

**ಸರ್ಕಾರದ ಆದೇಶ ಸಂಖ್ಯೆ:ವಇ 26 ಕೊಮಂಲೆ 2007, ಬೆಂಗಳೂರು, ದಿನಾಂಕ:11ನೇ ಆಗಸ್ಟ್, 2009**

ನಿರ್ಮಲ ಜ್ಯೋತಿ ಯೋಜನೆಯ 2ನೇ ಹಂತ ಕಾಮಗಾರಿಗಳ ಬಿಲ್ಲುಗಳನ್ನು ಪಾವತಿಸುವ ಸಲುವಾಗಿ ರೂ. 3.66 ಕೋಟಿ (ಮೂರು ಕೋಟಿ ಅರವತ್ತಾರು ಲಕ್ಷಗಳು ಮಾತ್ರ) ಅನುದಾನವನ್ನು 2009–10ನೇ ಸಾಲಿನ ಆಯವ್ಯಯದಲ್ಲಿ ಕೊಳಚೆ ಸುಧಾರಣೆ ಯೋಜನೆಯ ಲೆಕ್ಕ ಶೀರ್ಷಿಕೆ 2217–04–191–2–02 (P) ಅಡಿಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲಾಗಿದೆ. ಈಗಾಗಲೇ ನಿರ್ಮಲ ಜ್ಯೋತಿ ಯೋಜನೆಯ ಅನುಷ್ಠಾನದಲ್ಲಿ ಹೊರಡಿಸಲಾಗಿರುವ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಗುತ್ತಿಗೆದಾರರಿಗೆ ಅಂತಿಮ ಪಾವತಿ ಮಾಡುವ ಮುನ್ನ 3rd Party Inspection ಮಾಡಿಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಈ ಮೊತ್ತವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ವಸತಿ ಇಲಾಖೆಯ ಉಪ ಕಾರ್ಯದರ್ಶಿಯವರ ಮೇಲು ಸಹಿ ಪಡೆದ ನಂತರ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಎಫ್‌ಡಿ 377 ವೆಚ್ಚ–9/2009, ದಿನಾಂಕ:24.7.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2005

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

## ENERGY SECRETARIAT

**Sub:** Extension of time limit to implement 5.06 MW wind power project in favour M/s Marudhavel Industries Limited-reg.

**Read:** 1. Government Order No.DE 26 NCE 1999 dated:13.5.2009.

2. Show Cause Notice No:EN 449 NCE 2008 dated 27.12.2008.
3. Letter received from M/s Marudhavel Industries Limited vide No:MAIL/CTA/2008-09 dated:6.1.2009.
4. Government letter No. EN 449 NCE 2008 dated:9.4.2009.
5. Letter No. KRED /08/MIL/2009/1973 dated:9/17.6.2009 received from the Managing Director Karnataka Renewable Energy Development Limited, Bangalore.

**PREAMBLE:**

In Government Order read at (1) above, sanction has been accorded for the establishment of 5.06 MW wind power capacity to M/s Marudhavel Industries Limited at Madanayakanahalli, Arisinagundi wind zone.

Show Cause Notice read at (2) above was issued to M/s Marudhavel Industries Limited for no action was taken for the implementation of the above project and show Cause why action should not be taken to cancel the project and requested to reply for the show cause notice within 7 days from the date of receipt of the notice.

In the letter read at (3) above. M/s Marudhavel Industries Limited has furnished a reply to the Show Causes Notice stating that the progress done in the implementation of the project.

In the Government letter read at (4) above, KREDL has been asked to give its opinion on the reply furnished by M/s Marudhavel Industries Limited.

In the letter read at (5) above, the Managing Director, Karnataka Renewable Energy Development Limited, Bangalore has recommended for the extention of time limit upto the end of December 2009 for the implementation of the project.

The proposal has been examined in detail and hence, the following Order.

**Government Order No. EN 449 NCE 2008, Bangalore, Dated:14th August, 2009**

Government accords approval for the extension of time limit to implement 5.06 MW wind power capacity to M/s Marudhavel Industries Limited at Madanayakanahalli, Arisingundi wind zone upto 31st December 2009.

Government has got the power to cancel/modify this Order.

The other terms and conditions of the original allotment order shall be inforce.

By order and in the name of Governor of Karnataka

P.R. 2007

**S.J. SAMPATH KUMAR**

Under Secretary to Government

Energy Department

**Sub:** Transfer of 2.4 MW Wind Power Capacity in favour of M/s Cepco Industries Private Limited –reg.

**Read:** 1. Government Order No. EN:398:NCE:2005 dated 20.4.2006.

2. Government Order No. EN:209 NCE:2006 dated:26.5.2006.
3. Government Order No. EN:146 NCE:2007 dated 17.5.2007
4. Letter No. KRED /08/CEPCO-EIL/2009/2405 dated 4/6.8.2009 received from the Managing Director, Karnataka Renewable Energy Development Limited, Bangalore.

**PREAMBLE:**

In the Government order read at (1) and (2) above, sanction has been accorded for implementation of 261.61 MW capacity Wind Power Project at different locations of Belgaum and Gadag Districts in favour of M/s Enercon India Limited.

In the Government Order read at (3) above, sanction has been accorded for enhancement of the allotted wind power capacity from 32.2 MW to 86.4 MW [serial No. 2 and 4 G.O. read at (1) ] and also for enhancement of allotted wind power capacity from 40.00 MW to 182.4 MW [serial No.9 G.O. read at (1)] above in favour of M/s Enercon India Limited.

The Managing Director, Karnataka Renewable Energy Development Limited, Bangalore in his letter read at (4) above has recommended to the Government for transfer of 2.4 MW Wind Power capacity from out of sub-capacity of 182.4 MW of M/s Enercon India Limited in favour of M/s Cepco Industries Private Limited at Beladadi Village, Gadag Taluk, Gadag District.

The proposal has been examined in detail and the following orders issued:

**Government Order No:EN 443 NCE 2009, Bangalore, Dated:17th August, 2009**

Government accords approval for transfer of 2.4 MW Wind Power capacity from out of sub-capacity of 182.4 MW of M/s Enercon India Limited in favour of M/s Cepco Industries Private Limited as detailed below:

Identified potential place is a plain area situated at about 6 Km on the South-West of Gadag Town and it comprises agriculture area. It has gentle elevation of about 650 to 763 mtrs. The entire are is covered in the following Geographical co-ordinates:

**Latitude:** 15°15'43-15°25'0''N

**Longitude:** 75°31'15"- 75°36'57" E

**Ridgepeaks**:672,659,687,679,674,709,703,758,764,763,750m Amsl.

→

| Village | SN | Taluk/District | Extent (A-G) |
|---|---|---|---|
| Beladadi | 185 | Gadag/Gadag | 1.10 |
| Beladadi | 186 | Gadag/Gadag | 1.10 |
| Beladadi | 171/1 | Gadag/Gadag | 1.10 |
| | | Total | 3.30. |

This Order issues subject to the following Conditions:

1. M/s Cepco Industries Private Limited shall execute an agreement with Government within 45 (forty five) days from the date of issue of this Order.
2. PPA is assigned to HESCOM. HESCOM shall execute the PPA with M/s Cepco Industries Private Limited within a period of one month.
3. The Government has got power to Cancel/modify this Order.

The other terms and conditions of the Government Order read at (1) above shall IPSO FACTO applicable.

By order and in the name of the Governor of Karnataka

**S.J. SAMPATH KUMAR**

Under Secretary to Government

Energy Department

P.R. 2008

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ಸೇರ್ಪಡೆ**

**ಸಂಖ್ಯೆ:ಅಪಜೀ 162 ಎಫ್ ಡಬ್ಲ್ಯೂಎಲ್ 2008, ಬೆಂಗಳೂರು, ದಿನಾಂಕ:24ನೇ ಆಗಸ್ಟ್, 2009**

ಸರ್ಕಾರದ ಆದೇಶ ಸಂಖ್ಯೆ:ಅಪಜೀ 162 ಎಫ್ ಡಬ್ಲ್ಯೂಎಲ್ 2008 ದಿನಾಂಕ:5.6.2009 ರಲ್ಲಿ ಕಾಡು ಪ್ರಾಣಿಗಳಿಂದ ಬೆಳೆ ಹಾನಿಯಾದ ಪ್ರಕರಣಗಳಿಗೆ ಮಂಜೂರು ಮಾಡಬಹುದಾದ ಪರಿಹಾರ ಧನವನ್ನು ಪರಿಷ್ಕರಿಸಿ ತಿದ್ದುಪಡಿ ಮಾಡಿ ಹೊರಡಿಸಿದ ಆದೇಶದ ಕೊನೆಯ ಕಂಡಿಕೆಯಲ್ಲಿ" ಸದರಿ ಆದೇಶ ದಿನಾಂಕ:5.6.2009 ರಿಂದ ಜಾರಿಗೆ ಬರುವುದು" ಎಂಬುದನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2029

**ಪಿ.ಆರ್. ಕಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಇಂಧನ ಸಚಿವಾಲಯ**

**ವಿಷಯ :** ಮೆ:ಶ್ರೀ ಪ್ರಭುಲಿಂಗೇಶ್ವರ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ ರವರ 17.5. ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು 38.45 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**

1 ಸರ್ಕಾರಿ ಪತ್ರ ಸಂಖ್ಯೆ:ಡಿಇ 64 ಎನ್‌ಸಿಇ 97 ದಿನಾಂಕ:22.11.1997.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/04/ಎಸ್‌ಪಿಎಸ್‌ಸಿಎಲ್/09/1703 ದಿನಾಂಕ: 29.4.2009/ 18.5.2009.

3. ಕ್ರೆಡಲ್ ಪತ್ರ ಸಂಖ್ಯೆ:ಕೆಆರ್‌ಇಡಿ/04/ಎಸ್‌ಪಿಎಸ್‌ಸಿಎಲ್/09/2331 ದಿನಾಂಕ:15./24.7.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಮೆ:ಶ್ರೀ ಪ್ರಭುಲಿಂಗೇಶ್ವರ ಶುಗರ್ಸ್ ಮಿಲ್ಸ್ ರವರಿಗೆ ಬಿಜಾಪುರ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಸಿದ್ದಾಪುರ ಎಂಬಲ್ಲಿ 17.5 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನೆಯನ್ನು ಸ್ಥಾಪಿಸಲು ನಿರಾಕ್ಷೇಪಣೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ(2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:ಶ್ರೀ ಪ್ರಭುಲಿಂಗೇಶ್ವರ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ ಇವರಿಗೆ ಅನುಮತಿಸಲಾದ 17.5 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಯೋಜನಾ ಘಟಕವನ್ನು 38.45 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ(3)ರ ಪತ್ರದಲ್ಲಿ ಕ್ರೆಡಲ್‌ನ ವ್ಯವಸ್ಥಾಪಕ ನಿರ್ದೇಶಕರು ಕೋರಿರುವ ಮಾಹಿತಿ/ವಿವರಗಳನ್ನು ನೀಡಿ ಮೆ: ಶ್ರೀ ಪ್ರಭುಲಿಂಗೇಶ್ವರ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ ಇವರಿಗೆ ಅನುಮತಿಸಲಾದ 17.5 ಮೆಗಾ ವ್ಯಾಟ್ ಸಾಮರ್ಥ್ಯದ ಸಹ ವಿದ್ಯುತ್ ಉತ್ಪಾದನಾ ಘಟಕವು ಈಗಾಗಲೇ 2001 ರಲ್ಲಿ ಕಾರ್ಯಾರಂಭ ಮಾಡಿದ್ದು, ಕಂಪನಿಯ ಕೋರಿಕೆಯನ್ನು ಪರಿಗಣಿಸುವಂತೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರದ ಆದೇಶ ಸಂಖ್ಯೆ:ಇಎನ್ 354 ಎನ್ ಸಿಇ 2009, ಬೆಂಗಳೂರು, ದಿನಾಂಕ: 22ನೇ ಆಗಸ್ಟ್, 2009**

ಮೆ:ಶ್ರೀ ಪ್ರಭುಲಿಂಗೇಶ್ವರ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ ಇವರಿಗೆ ಬಿಜಾಪುರ ಜಿಲ್ಲೆಯ ಜಮಖಂಡಿ ತಾಲ್ಲೂಕಿನ ಸಿದ್ದಾಪುರ ಎಂಬಲ್ಲಿ ಅನುಮತಿಸಲಾದ ಸಹ ವಿದ್ಯುತ್ ಯೋಜನಾ ಘಟಕದ ಸಾಮರ್ಥ್ಯವನ್ನು 17.5 ಮೆಗಾ ವ್ಯಾಟ್ ನಿಂದ 38.45 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಓದಲಾದ (1)ರ ನಿರಾಕ್ಷೇಪಣಾ ಪತ್ರದಲ್ಲಿನ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2030

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**INFRASTRUCTURE DEVELOPMENT SECRETARIAT**

**Sub:** Development of State Highway-132 (ie, Sangankallu-Moka Road in Bellary) on PPP mode.

**Ref:** 1. Govt Order No:ID/115/ITS/2008 Bangalore Dated17th July 2009.

2. Tender notification No:KSHIP/IDD/SH-132 MOKA/966 Dated 11th Aug 09

**PREAMBLE:**

1. The Government vide Government order dated 17th July 2009 has accorded "in-principle approval" to take up the Development of State Highway-132(i.e, Sangankallu-Moka Road-Bellary) on PPP mode.
2. As per the Govt order at ref-(1) above, Karnataka State Highways Improvement Project (KSHIP) is the nodal agency for carrying out the procurement activities. The 'authority' for this contract would be the Executive Engineer, PWP & IWT division, Bellary.
3. As per the notification, the bidders are to be facilitated to down load the bid documents from the e-portal from August 24, 2009 KSHIP has submitted the bid documents for approval so as to upload the approved documents in the e-portal website.

**Government Order No:ID:115:ITS:2008, Bangalore, Dated:24th August 2009**

The State Government is pleased to accord:

1. Approval to the RFP document for issue to bidders through the e-procurement process.
2. Approval to nominate Executive Engineer, PWP & IWT division, Bellary as 'authority' for the project; the authority will invite the bids.
3. Karnataka State Highways Improvement Project (KSHIP) would liaise with the 'authority' periodically and report to Infrastructure Development Department (IDD)
4. Approval to initiate land acquisition and identify the utilities to be relocated.

By order and in the name of Governor of Karnataka

P.R. 2033

**K.S. VENUGOPAL**

Under Secretary to Government

Infrastructure Development Department

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ :** ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನಲ್ಲಿ ಬರುವ ಹಾಲ್ ದೊಡ್ಡೇರಿಯಿಂದ ಮಾರ್ಗ ಸ್ಟೀಲ್ ಫ್ಯಾಕ್ಟರಿ, ಜೋಡಿದೇವರಹಳ್ಳಿ, ದೊಡ್ಡ, ಆಲದಮರ ಗೇಟ್ ರಸ್ತೆ–11 ಕಿ.ಮೀ. ಎಂ.ಡಿ.ಆರ್.–30 ರಸ್ತೆಯನ್ನು ಗ್ರಾಮೀಣ ರಸ್ತೆಯನ್ನಾಗಿ ಕೆಳದರ್ಜೆಗೊಳಿಸುವ ಬಗ್ಗೆ.

**ಓದಲಾಗಿದೆ :** ಮಾನ್ಯ ಶಾಸಕರು, ಶಿರಾ ವಿಧಾನಸಭಾ ಕ್ಷೇತ್ರ ಇವರ ಪತ್ರ ದಿನಾಂಕ:24.8.2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಮಾನ್ಯ ಶಾಸಕರು, ಶಿರಾ ವಿಧಾನಸಭಾ ಕ್ಷೇತ್ರ ಇವರು ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನಲ್ಲಿ ಬರುವ ಹಾಲ್ ದೊಡ್ಡೇರಿಯಿಂದ ಮಾರ್ಗ ಸ್ಟೀಲ್ ಫ್ಯಾಕ್ಟರಿ, ಜೋಡಿದೇವರಹಳ್ಳಿ, ದೊಡ್ಡ ಆಲದಮರ ಗೇಟ್ ರಸ್ತೆ–11 ಕಿಮೀ, ಎಂ.ಡಿ.ಆರ್.–30 ರಸ್ತೆಯು ಪೂರ್ಣ ಡಾಂಬರ್ ಇಲ್ಲದೆ ಕೆಲವು ಭಾಗಗಳಲ್ಲಿ ಮಣ್ಣಿನ ರಸ್ತೆ, ಜಲ್ಲಿ ರಸ್ತೆ ಇದ್ದು, ಈ ರಸ್ತೆಯು ಗ್ರಾಮೀಣ ರಸ್ತೆಯಂತಿದ್ದು, ಈ ಮಾರ್ಗ ಬರುವ ಅನೇಕ ಹಳ್ಳಿಗಳ ರಸ್ತೆಯು ಹದಗೆಟ್ಟಿರುವುದರಿಂದ, ಈ ರಸ್ತೆಯನ್ನು ಗ್ರಾಮೀಣ ರಸ್ತೆಯನ್ನಾಗಿ ಕೆಳದರ್ಜೆಗೊಳಿಸಿ ಪ್ರಧಾನಮಂತ್ರಿ ಗ್ರಾಮ್ ಸಡಕ್ ಯೋಜನೆ ಅಡಿಯಲ್ಲಿ ಸದರಿ ರಸ್ತೆ ಅಭಿವೃದ್ಧಿ ಕಾಮಗಾರಿಯನ್ನು ಕೈಗೆತ್ತಿಕೊಳ್ಳಲು ಅನುವು ಮಾಡಿಕೊಡುವಂತೆ ಕೋರಿರುತ್ತಾರೆ.

ಮಾನ್ಯ ಶಾಸಕರ ಕೋರಿಕೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 511 ಸಿಆರ್‌ಎಂ 2009, ಬೆಂಗಳೂರು, ದಿನಾಂಕ:25ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ, ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನಲ್ಲಿ ಬರುವ ಹಾಲ್ ದೊಡ್ಡೇರಿಯಿಂದ ಮಾರ್ಗ ಸ್ಟೀಲ್ ಫ್ಯಾಕ್ಟರಿ, ಜೋಡಿದೇವರಹಳ್ಳಿ, ದೊಡ್ಡ ಆಲದಮರ ಗೇಟ್ ರಸ್ತೆ–11 ಕಿ.ಮೀ. ಎಂ.ಡಿ.ಆರ್–30

ರಸ್ತೆಯನ್ನು ಗ್ರಾಮೀಣ ರಸ್ತೆಯನ್ನಾಗಿ ಕೆಳದರ್ಜೆಗೊಳಿಸಿ (Denotify) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವ್ಯಾಪ್ತಿಗೆ ವರ್ಗಾಯಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2063

**ಎಸ್.ಆರ್. ರೇವಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ
(ಸಂಪರ್ಕ)

## ಕಂದಾಯ ಸಚಿವಾಲಯ

**ವಿಷಯ :** ಪ್ರವಾಹ ಪೀಡಿತ ಗ್ರಾಮಗಳನ್ನು ಸ್ಥಳಾಂತರಿಸಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1 ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು
2. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 1 ಟಿಎಸ್‌ವೈ 2008 ದಿ:26.2.08.
3. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 1 ಟಿಎಸ್‌ವೈ 2008 ದಿ:31.3.08
4. ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 1 ಟಿಎಸ್‌ವೈ 2008 (ಭಾ–1) ದಿ:16.8.08
5. ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ ಇವರ ಅ.,ಸ.ಪತ್ರ ಸಂ:ಭೂಸ್ವಾಧೀನ/ಇತರೆ, ವಹಿ–32/2007–08, ದಿ:22.5.2009.

**ಪ್ರಸ್ತಾವನೆ:**

2007ನೇ ಸೆಪ್ಟೆಂಬರ್ ಮಾಹೆಯಲ್ಲಿ ಬಿದ್ದ ಭಾರಿ ಮಳೆಯಿಂದ ಬಾಗಲಕೋಟೆ, ಧಾರವಾಡ, ಗದಗ್ ಜಿಲ್ಲೆಗಳಲ್ಲಿ 30 ಗ್ರಾಮಗಳು ಪ್ರವಾಹದಿಂದ ತೀವ್ರ ಹಾನಿಗೊಂಡಿದ್ದು, ಈ ಗ್ರಾಮಗಳನ್ನು ಹಂತ ಹಂತವಾಗಿ ಸ್ಥಳಾಂತರಿಸಲು ನಿರ್ಣಯಿಸಿ, ಒಂದನೇ ಹಂತದಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಆದೇಶದಂತೆ ಬಾಗಲಕೋಟೆ ಜಿಲ್ಲೆಗೆ ರೂ. 475.88 ಲಕ್ಷ ಅನುದಾನ ಬಿಡುಗಡೆ ಮಾಡಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಆದೇಶದಂತೆ 2ನೇ ಹಂತದಲ್ಲಿ ಗದಗ್ ಜಿಲ್ಲೆಗೆ ಹೊಳೆಮಣ್ಣೂರು ಮತ್ತು ಕುರ್ಲಗೇರಿ ಗ್ರಾಮಗಳನ್ನು ಸ್ಥಳಾಂತರಿಸಲು ರೂ. 100.00 ಲಕ್ಷ ಮತ್ತು ಧಾರವಾಡ ಜಿಲ್ಲೆಗೆ ಅರಹಟ್ಟಿ ಮತ್ತು ಕೊಂಗವಾಡ ಗ್ರಾಮಗಳನ್ನು ಸ್ಥಳಾಂತರಿಸಲು 108 ಲಕ್ಷ ರೂ.ಗಳ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಸರ್ಕಾರದ ಆದೇಶದಲ್ಲಿ ಧಾರವಾಡ ಜಿಲ್ಲೆಗೆ ರೂ. 189.50 ಲಕ್ಷ ಹಾಗೂ ಗದಗ್ ಜಿಲ್ಲೆಗೆ ರೂ. 610.50 ಲಕ್ಷ ಅನುದಾನವನ್ನು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಬಿಡುಗಡೆಮಾಡಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿನ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಗದಗ್ ಜಿಲ್ಲೆ ಇವರು ಹೊಳೆ ಮಣ್ಣೂರು ಮತ್ತು ಕುರ್ಲಗೇರಿ ಗ್ರಾಮಗಳನ್ನು ಸ್ಥಳಾಂತರಿಸಲು ಹೆಚ್ಚುವರಿಯಾಗಿ ರೂ. 434.84 ಲಕ್ಷ ಬಿಡುಗಡೆ ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಧಾರವಾಡ, ಗದಗ್ ಮತ್ತು ಬಾಗಲಕೋಟೆ ಜಿಲ್ಲೆಯ 30 ಗ್ರಾಮಗಳನ್ನು ಸ್ಥಳಾಂತರಿಸಲು ತಗಲುವ ವೆಚ್ಚ ಒಟ್ಟು ರೂ. 13195.27 ಲಕ್ಷಗಳನ್ನು ಸಿಆರ್‌ಎಫ್ ಅಡಿಯಲ್ಲಿ ಬಿಡುಗಡೆಮಾಡುವಂತೆ ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಕೇಂದ್ರ ಸರ್ಕಾರವು ಪತ್ರ ಸಂಖ್ಯೆ:48–3/2008–DM-III ದಿನಾಂಕ:6.6.2008ರಲ್ಲಿ CRF /NCCF ಮೊತ್ತ ದಿಂದ ತುರ್ತು ಪರಿಹಾರ ನೀಡಲು ಮಾತ್ರವೆಚ್ಚ ಮಾಡಬಹುದಾಗಿದೆ. ಆದರೆ ಗ್ರಾಮಗಳ ಸ್ಥಳಾಂತರಕ್ಕೆ ಅವಕಾಶ ಇರುವುದಿಲ್ಲವೆಂದು ತಿಳಿಸಿರುತ್ತದೆ. ಮತ್ತು ಈ ಪ್ರಸ್ತಾವನೆಗೆ ಹಣವನ್ನು ರಾಜ್ಯ ಯೋಜನೆಯಲ್ಲಿ ಸೇರಿಸಿ ಯೋಜನೆ ಆಯೋಗದಿಂದ ಪಡೆಯುವಂತೆ ತಿಳಿಸಿರುತ್ತದೆ. ಆರ್ಥಿಕ ಇಲಾಖೆಯು ಸಹ ಈ ಅನುದಾನವನ್ನು ಯೋಜನೆಯಲ್ಲಿ ಸೇರಿಸುವಂತೆ ಯೋಜನಾ ಇಲಾಖೆಯನ್ನು ಕೋರುವಂತೆ ತಿಳಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಮೇಲಿನ 3 ಜಿಲ್ಲೆಗಳ ಒಟ್ಟು 30 ಗ್ರಾಮಗಳನ್ನು ಸ್ಥಳಾಂತರಿಸುವ ಪ್ರಸ್ತಾವನೆಗೆ ಅನುದಾನ ಬಿಡುಗಡೆ ಮಾಡುವಂತೆ ಕೋರಿ, ಯೋಜನಾ ಇಲಾಖೆಗೆ ಕಳುಹಿಸಿಕೊಡಲಾಗಿದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಹೊಳೆಮಣ್ಣೂರು ಮತ್ತು ಕುರ್ಲಗೇರಿ ಗ್ರಾಮಗಳನ್ನು ಸ್ಥಳಾಂತರಿಸಲು ಗದಗ್ ಜಿಲ್ಲಾಧಿಕಾರಿಗಳು ರೂ. 434.84 ಲಕ್ಷ ಅನುದಾನ ಬಿಡುಗಡೆ ಮಾಡುವಂತೆ ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿ ಜಿಲ್ಲಾಧಿಕಾರಿಗಳು ರಸ್ತೆ ಹಾಗೂ ಇತರೆ ಅಭಿವೃದ್ಧಿ ಕಾಮಗಾರಿಗಳನ್ನು NREGA ಯೋಜನೆಯಲ್ಲಿ ಕೈಗೊಳ್ಳುವುದು ಸೂಕ್ತವೆಂದು ತೀರ್ಮಾನಿಸಿದೆ. ಆಸ್ಪತ್ರೆ ಕಟ್ಟಡವನ್ನು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ, ಶಾಲಾ ಕಟ್ಟಡವನ್ನು ಸರ್ವಶಿಕ್ಷಣ ಅಭಿಯಾನ ಯೋಜನೆಯಡಿ ನಿರ್ಮಿಸಲು ಕ್ರಮಕೈಗೊಳ್ಳಬಹುದೆಂದು ತೀರ್ಮಾನಿಸಿದೆ. ಉಳಿದ ಹೆಚ್ಚುವರಿ ವೆಚ್ಚಕ್ಕಾಗಿ ಒಂದು ಕೋಟಿ ರೂಪಾಯಿ ಬಿಡುಗಡೆ ಮಾಡಲು ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 1 ಟಿಎಸ್ ವೈ 2008, ಬೆಂಗಳೂರು, ದಿನಾಂಕ:22ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಗದಗ್ ಜಿಲ್ಲೆಯಲ್ಲಿ ಹೊಳೆ ಮಣ್ಣೂರು ಮತ್ತು ಕುರ್ಲಗೇರಿ ಗ್ರಾಮಗಳನ್ನು ಸ್ಥಳಾಂತರಿಸಲು ಜಿಲ್ಲಾಧಿಕಾರಿಗಳು, ಗದಗ್ ಜಿಲ್ಲೆ, ಇವರಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ರೂ. 100.00 ಲಕ್ಷ (ರೂ. ಒಂದು ನೂರು ಲಕ್ಷ ಮಾತ್ರ) ಗಳನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 629 ವೆಚ್ಚ–7/2009 ದಿನಾಂಕ:18.7.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2065

**ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

**ವಿಷಯ :** ಶ್ರೀಮತಿ ಭಾರತಿ ಹೊಳ್ಳಿಕೇರಿ, 2005ನೇ ತಂಡ ಪ್ರಸ್ತುತ ತಹಶೀಲ್ದಾರ್, ಸೇಡಂ ತಾಲ್ಲೂಕು ಇವರು ನೀಡಿರುವ ರಾಜೀನಾಮೆಯನ್ನು ಅಂಗೀಕರಿಸುವ ಕುರಿತು.

**ಓದಲಾಗಿದೆ :**
1 ದಿನಾಂಕ:22.6.2006ರ ಅಧಿಸೂಚನೆ ಸಂಖ್ಯೆ:ಕಂಇ 110 ಎಎಸ್‌ಡಿ 2006.
2. ಅಧಿಕೃತ ಜ್ಞಾಪನ ಸಂಖ್ಯೆ:ಕಂಇ 135 ಎಎಸ್‌ಡಿ 2006, ದಿನಾಂಕ:25.8.2006.
3. ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 266 ಎಎಸ್‌ಡಿ 2007, ದಿನಾಂಕ:15.10.2007.
4. ಶ್ರೀಮತಿ ಭಾರತಿ ಹೊಳ್ಳಿಕೇರಿ, ತಹಶೀಲ್ದಾರ್, ಸೇಡಂ ಇವರ ಮನವಿ ದಿನಾಂಕ:26.8.2009.

**ಪ್ರಸ್ತಾವನೆ:**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1977ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ಇ(1) 41/2005–06/ PSC, Dt: 4.5.2006 ರನ್ವಯ ಆಯ್ಕೆಗೊಂಡ 2005ನೇ ಸಾಲಿನ 40 ಅಭ್ಯರ್ಥಿಗಳನ್ನು ಮೇಲೆ ಓದಲಾದ ಕ್ರ.ಸಂ (1)ರ ದಿನಾಂಕ:22.6.2006ರ ಸರ್ಕಾರದ ಅಧಿಸೂಚನೆಯಲ್ಲಿ ತಹಶೀಲ್ದಾರ್, ಗ್ರೂಪ್–ಬಿ ಹುದ್ದೆಗೆ ಪರಿವೀಕ್ಷಣೆಯ ಮೇಲೆ ನೇಮಿಸಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರರಾಗಿ ನೇಮಕಗೊಂಡ (ಕ್ರ.ಸಂ. 15) ಶ್ರೀಮತಿ ಭಾರತಿ ಹೊಳ್ಳಿಕೇರಿ ಇವರು ದಿನಾಂಕ:23.6.2006ರಂದು ಕಂದಾಯ ಇಲಾಖೆಯಲ್ಲಿ ಪರೀಕ್ಷಾರ್ಥ ತಹಶೀಲ್ದಾರ್ ಹುದ್ದೆಗೆ ಹಾಜರಾಗಿರುತ್ತಾರೆ.

ಉಲ್ಲೇಖ (2)ರ ಅಧಿಕೃತ ಜ್ಞಾಪನದಲ್ಲಿ ಪರೀಕ್ಷಾರ್ಥ ತಹಶೀಲ್ದಾರರುಗಳಿಗೆ ವಿವಿಧ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಲಾಗಿತ್ತು. ನಂತರ ಜಿಲ್ಲಾ ಮಟ್ಟದ ತರಬೇತಿಗಾಗಿ ಶ್ರೀಮತಿ ಭಾರತಿ ಹೊಳ್ಳಿಕೇರಿ ಇವರನ್ನು ರಾಯಚೂರು ಜಿಲ್ಲೆಗೆ ನಿಯೋಜಿಸಲಾಗಿತ್ತು.

ಉಲ್ಲೇಖ (3)ರ ಅಧಿಸೂಚನೆಯಲ್ಲಿ ಶ್ರೀಮತಿ ಭಾರತಿ ಹೊಳ್ಳಿಕೇರಿ ಇವರನ್ನು ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ರಾಯಚೂರು ಜಿಲ್ಲೆ ಇಲ್ಲಿನ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಲಾಗಿರುತ್ತದೆ. ಪ್ರಸ್ತುತ ಶ್ರೀಮತಿ ಭಾರತಿ ಹೊಳ್ಳಿಕೇರಿ, ತಹಶೀಲ್ದಾರ್, ಸೇಡಂ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇವರು ಉಲ್ಲೇಖ (4), ದಿನಾಂಕ: 26.8.2009ರಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ, ತಮಗೆ ಐ.ಪಿ.ಎಸ್. ಸಿವಿಲ್ ಸೇವೆಗೆ ಆಯ್ಕೆಗೊಂಡಿರುವುದರಿಂದ ಸದರಿ ತಹಶೀಲ್ದಾರ್ ಹುದ್ದೆಗೆ ರಾಜೀನಾಮೆಯನ್ನು ನೀಡುತ್ತಿರುವುದಾಗಿ ಹಾಗೂ ಈ ರಾಜೀನಾಮೆಯನ್ನು ಅಂಗೀಕರಿಸಬೇಕೆಂದು ಶ್ರೀಮತಿ ಭಾರತಿ ಹೊಳ್ಳಿಕೇರಿ ತಹಶೀಲ್ದಾರ್, ಸೇಡಂ ಇವರು ಕೋರಿರುತ್ತಾರೆ.

ಸದರಿ ತಹಶೀಲ್ದಾರರ ರಾಜೀನಾಮೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 496 ಎಎಸ್‌ಡಿ 2009, ಬೆಂಗಳೂರು, ದಿನಾಂಕ:26ನೇ ಆಗಸ್ಟ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀಮತಿ ಭಾರತಿ ಹೊಳ್ಳಿಕೇರಿ, 2005ನೇ ತಂಡ, ಪ್ರಸ್ತುತ ತಹಶೀಲ್ದಾರ್, ಸೇಡಂ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇವರು ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ಸಲ್ಲಿಸಿರುವ ಬೇಷರತ್ ರಾಜೀನಾಮೆಯನ್ನು ದಿನಾಂಕ:26.8.2009ರಿಂದ ಜಾರಿಗೆ ಬರುವಂತೆ ಅಂಗೀಕರಿಸಿ, ಕಂದಾಯ ಇಲಾಖೆಯ ಗುಂಪು–ಬಿ ತಹಶೀಲ್ದಾರ್ ಹುದ್ದೆಯಿಂದ ಬಿಡುಗಡೆಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2066

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಗೆ ಪೀಠೋಪಕರಣ ಖರೀದಿಸಲು ಅನುದಾನ ನೀಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ:ಕಸನಿ :66:ದಾಸ್ತಾನು:2008–09, ದಿನಾಂಕ:28.5.2009 ಮತ್ತು 17.7.2009.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ:28.5.2009 ಮತ್ತು 17.7.2009ರ ಪತ್ರಗಳಲ್ಲಿ ಬಾಗಲಕೋಟೆ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಗೆ ಪೀಠೋಪಕರಣ ಖರೀದಿಸಲು 2008–09ನೇ ಸಾಲಿನಲ್ಲಿ ಹಣದ ಲಭ್ಯತೆ ಹಾಗೂ ಕಾಲಾವಕಾಶದ ಕೊರತೆಯಿಂದ ಪ್ರಸ್ತಾವನೆ ಸಲ್ಲಿಸಲು, ಸಾಧ್ಯವಾಗಿರುವುದಿಲ್ಲವೆಂದು, ಪ್ರಸ್ತುತ 2009–10ನೇ ಸಾಲಿನ ಆಯವ್ಯಯದಲ್ಲಿ ರೂ. 1,28,733.00ಗಳನ್ನು ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬಾಗಲಕೋಟೆ ಜಿಲ್ಲೆ ಇವರಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 61 ಕಸನಿ 2009, ಬೆಂಗಳೂರು, ದಿನಾಂಕ:27ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲಾ ಸಹಾಯಕ ನಿರ್ದೇಶಕರ ಕಛೇರಿಗೆ ಪೀಠೋಪಕರಣ ಖರೀದಿಸಲು ರೂ. 1,28,733.00 ಗಳನ್ನು (ರೂಪಾಯಿ ಒಂದು ಲಕ್ಷ ಇಪ್ಪತ್ತೆಂಟು ಸಾವಿರದ ಏಳುನೂರ ಮೂವತ್ತು ಮೂರು ಮಾತ್ರ) ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬಾಗಲಕೋಟೆ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು. ಹಾಗೂ ಪೀಠೋಪಕರಣಗಳನ್ನು ಖರೀದಿಸುವ ಬಗ್ಗೆ ಬಿಲ್ಲನ್ನು ಸರ್ಕಾರದ ಮಾಹಿತಿಗಾಗಿ ಕಳುಹಿಸಿಕೊಡುವುದು.

ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಶಿಇ 1815/ಐಎಫ್(ಬಿ&ಎ) 2009 ದಿನಾಂಕ:14.8.2009ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2067

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** 2009–10ನೇ ಸಾಲಿನಲ್ಲಿ ಪ್ರಧಾನ ಲೆಕ್ಕಶೀರ್ಷಿಕೆ 5054 ರ ಅಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ 2ನೇ ತ್ರೈಮಾಸಿಕ ಕಂತನ್ನು ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :** 1 ಸರ್ಕಾರದ ಆದೇಶ ಸಂಖ್ಯೆ:ಲೋಇ 59 ಇಎಪಿ 2008, ಬೆಂಗಳೂರು, ದಿನಾಂಕ:22.6.2009

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ:ಕರಅನಿನಿ/ವ್ಯ.ನಿ./2009–10/ದಿನಾಂಕ:16.7.2009.

**ಪ್ರಸ್ತಾವನೆ:**

2009–10ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಲೆಕ್ಕಶೀರ್ಷಿಕೆ 5054–80–190–0–01–132 (ಯೋಜನೆ) ಅಡಿಯಲ್ಲಿ ಬಂಡವಾಳ ಕಾಮಗಾರಿಗಳಿಗಾಗಿ ರೂ. 225.00 ಕೋಟಿಗಳನ್ನು ಮತ್ತು ಲೆಕ್ಕಶೀರ್ಷಿಕೆ 5054–80–190–0–01–133 (ಯೋಜನೆ) ಅಡಿಯಲ್ಲಿ ವಿಶೇಷ ಅಭಿವೃದ್ಧಿ ಯೋಜನೆಗಾಗಿ ರೂ., 100.00 ಕೋಟಿಗಳನ್ನು ಒದಗಿಸಲಾಗಿದ್ದು ಒಟ್ಟು ರೂ. 325.00 ಕೋಟಿಗಳ ಅನುದಾನ ಒದಗಿಸಲಾಗಿದೆ.

ಉಲ್ಲೇಖಿತ (1)ರ ದಿನಾಂಕ:22.6.2009ರ ಸರ್ಕಾರಿ ಆದೇಶದಲ್ಲಿ ರೂ. 51.55 ಕೋಟಿ ರೂ.ಗಳನ್ನು ಮೊದಲನೇ ತ್ರೈಮಾಸಿಕದ ಅವಧಿಗೆ ನಿಗಮಕ್ಕೆ ಬಿಡುಗಡೆ ಮಾಡಲಾಗಿದೆ.

ಉಲ್ಲೇಖಿತ (2)ರ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರ ಪತ್ರದಲ್ಲಿ ಸದರಿ ಲೆಕ್ಕಶೀರ್ಷಿಕೆಗಳ ಅಡಿಯಲ್ಲಿ ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್ 2009ರ ಮಾಹೆಗಳ ಅಂತ್ಯಕ್ಕೆ ರಸ್ತೆ ಮತ್ತು ಸೇತುವೆ ಕಾಮಗಾರಿಗಳಿಗೆ ಬಾಕಿ ಇರುವ ಬಿಲ್ಲುಗಳನ್ನು ಪಾವತಿಸಲು 81.25 ಕೋಟಿ ರೂ.ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 59 ಇಎಪಿ 2008, ಬೆಂಗಳೂರು, ದಿನಾಂಕ: 18ನೇ ಆಗಸ್ಟ್, 2009**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡು ಪ್ರಗತಿಯಲ್ಲಿರುವ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗಾಗಿ 2009–10ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 5054–80–190–0–01–132 (ಯೋಜನೆ) ಇದರ ಅಡಿಯಲ್ಲಿ ಬಂಡವಾಳ ವೆಚ್ಚಕ್ಕಾಗಿ 56.25 ಕೊಟಿ ರೂ.ಗಳನ್ನು (ಐವತ್ತಾರು ಕೋಟಿ ಇಪ್ಪತ್ತೈದು ಲಕ್ಷ ರೂಪಾಯಿಗಳನ್ನು ಮಾತ್ರ) ಎರಡನೇ ತ್ರೈಮಾಸಿಕ ಅವಧಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಮುಂದುವರೆದು, ನಿಗಮವು 56.25 ಕೋಟಿ ರೂ.ಗಳ (ಐವತ್ತಾರು ಕೋಟಿ ಇಪ್ಪತ್ತೈದು ಲಕ್ಷ ರೂಪಾಯಿಗಳನ್ನು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ 17(ಸಿ)4 ರಲ್ಲಿನಂತೆ ಮಹಾಲೇಖಪಾಲರಿಂದ (ಎ ಅಂಡ್ ಇ) ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು; ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಇವರ ಮೇಲುರುಜು ಮಾಡಿಸಿ, ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ:ಲೋಇ 665 ಆಕೋ–1/09 ದಿನಾಂಕ:18.8.2009 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2082

**ಎಂ. ದೇವಿಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ

(ಇಎಪಿ)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಲಾ 45 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ:28ನೇ ಆಗಸ್ಟ್, 2009**

ಸರ್ಕಾರದ ಆದೇಶ ಸಂಖ್ಯೆ:ಲಾ 45 ಎಲ್‌ಸಿಎಲ್ 2009 ದಿನಾಂಕ:9.7.2009ರ ಆದೇಶ ಭಾಗದ ಕಂಡಿಕೆ (1)ರಲ್ಲಿ ಲೆಕ್ಕ ಶೀರ್ಷಿಕೆ 2014–00–800–1–03–059 (ಯೋಜನೆ) ಎಂದು ನಮೂದಿಸಿರುವುದನ್ನು "ಲೆಕ್ಕಶೀರ್ಷಿಕೆ ಸಂಖ್ಯೆ:2014–00–114–0–03–104" (Lawyers welfare fund) ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಸರ್ಕಾರದ ಆದೇಶದ ಕಂಡಿಕೆ 2ರಲ್ಲಿ ನಮೂದಿಸಿರುವ "ರಿಜಿಸ್ಟ್ರಾರ್ ಜನರಲ್ ಕರ್ನಾಟಕ ಉಚ್ಚ ನ್ಯಾಯಾಲಯ" ಎನ್ನುವ ಬದಲಾಗಿ "ಅಡ್ವೋಕೇಟ್ ಜನರಲ್, ಕರ್ನಾಟಕ ಬೆಂಗಳೂರು" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2068

**ಸಿ.ಎಂ. ಹೂಗಾರ**

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ತೋಟಗಾರಿಕೆ ಇಲಾಖೆಯ ಜಂಟಿ ನಿರ್ದೇಶಕರು (ಆಡಳಿತ) ಹುದ್ದೆಯನ್ನು ಅಪರ ನಿರ್ದೇಶಕರು (ಆಡಳಿತ) ಎಂದು ತಾತ್ಕಾಲಿಕವಾಗಿ ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ :** 1 ಅಧಿಸೂಚನೆ ಸಂಖ್ಯೆ:ಸಿಆಸುಇ 104 ಆಸೇವ 2009, ದಿನಾಂಕ:11.6.09.

2. ಪತ್ರಸಂಖ್ಯೆ:ತೋಇ:ಆ:ಸಿ:ವಿನಿ1:28:09–10ದಿನಾಂಕ:23/24–06–09–ತೋಟಗಾರಿಕೆನಿರ್ದೇಶಕರಿಂದ

3. ಕಡತ ಸಂಖ್ಯೆ:ಕೃತೋಇ 216 ತೋಇವಿ 2009

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ:11.6.09 ರಲ್ಲಿ ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್. "(ಆಯ್ಕೆ ಶ್ರೇಣಿ) ಅಧಿಕಾರಿ, ಇವರನ್ನು ಜಂಟಿ ನಿರ್ದೇಶಕರು, ತೋಟಗಾರಿಕೆ ಇಲಾಖೆಗೆ ನೇಮಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು, ಪ್ರಸ್ತುತ ತೋಟಗಾರಿಕೆ ಇಲಾಖೆಯಲ್ಲಿ ಜಂಟಿ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್ ಇವರ ವೇತನ ಶ್ರೇಣಿಯು ರೂ. 24450–31800 ಆಗಿದ್ದು, ಇವರ ವೇತನವು ತೋಟಗಾರಿಕೆಯ ಅಪರ ನಿರ್ದೇಶಕರ ವೇತನ ಶ್ರೇಣಿ (ರೂ 22125–30300) ಗಿಂತಲೂ ಹೆಚ್ಚಾಗಿರುತ್ತದೆ. ಆದುದರಿಂದ, ಸದರಿಯವರ ಪದನಾಮವನ್ನು ಅಪರ ನಿರ್ದೇಶಕರು (ಆಡಳಿತ) ಎಂದು ಪದನಾಮೀಕರಿಸುವಂತೆ ಕೋರಿರುತ್ತಾರೆ. ಮೇಲೆ ಕ್ರಮಸಂಖ್ಯೆ (3)ರ ಕಡತದಲ್ಲಿ, ಶ್ರೀ ಎಸ್. ತಹಸೀನ್ ಅಹಮದ್ ರವರ ವೇತನವು ತೋಟಗಾರಿಕೆಯ ಅಪರ ನಿರ್ದೇಶಕರ ವೇತನ ಶ್ರೇಣಿಗಿಂತಲೂ ಹೆಚ್ಚಾಗಿರುವುದರಿಂದ, ಇಲಾಖೆಯಲ್ಲಿ ನಿರ್ದೇಶಕರ ನಂತರದ ಹುದ್ದೆಯು ಅಪರ ನಿರ್ದೇಶಕರ ಹುದ್ದೆಯಾಗಿದ್ದು, ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್ ರವರು ಈ ಹುದ್ದೆಯಲ್ಲಿರುವ ತನಕ ಜಂಟಿ ನಿರ್ದೇಶಕರು (ಆಡಳಿತ) ಹುದ್ದೆಯ ಪದನಾಮವನ್ನು ಅಪರ ನಿರ್ದೇಶಕರು (ಆಡಳಿತ), ತೋಟಗಾರಿಕೆ ಇಲಾಖೆ ಎಂದು ತಾತ್ಕಾಲಿಕವಾಗಿ ಉನ್ನತೀಕರಿಸಲು ತೋಟಗಾರಿಕೆ ಇಲಾಖೆಯ ಸಹಮತಿ ನೀಡಿದೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 371 ಆಸೇಇ 09, ಬೆಂಗಳೂರು, ದಿನಾಂಕ:27ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಎಸ್. ತಹಸೀನ್ ಅಹಮದ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ, ಹಾಲಿ ಜಂಟಿ ನಿರ್ದೇಶಕರು (ಆಡಳಿತ), ತೋಟಗಾರಿಕೆ ಇಲಾಖೆ, ಬೆಂಗಳೂರು ಇವರ ಪದನಾಮವನ್ನು ದಿನಾಂಕ:15.6.09 ರಿಂದಲೇ ಜಾರಿಗೆ ಬರುವಂತೆ ಈ ಅಧಿಕಾರಿಯು ಈ ಹುದ್ದೆಯಲ್ಲಿ ಮುಂದುವರೆಯುವವರೆಗೆ ಅಪರ ನಿರ್ದೇಶಕರು (ಆಡಳಿತ), ತೋಟಗಾರಿಕೆ ಇಲಾಖೆ ಎಂದು ತಾತ್ಕಾಲಿಕವಾಗಿ ಪದನಾಮೀಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2070

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಇಲಾಖೆಯ ಅಪರ ಕಾರ್ಯದರ್ಶಿ (ಆಹಾರ ಸಂಸ್ಕರಣೆ) ಹುದ್ದೆಗೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 330 ಸಅಸೇ 2009 ದಿನಾಂಕ:19.6.2009.

2. ಅಧಿಸೂಚನೆ ಸಂಖ್ಯೆ:ಸಿಆಸುಇ 76 ಸೇಇಮು 2009 ದಿನಾಂಕ:19.6.2009.

3. ಕಡತ ಸಂಖ್ಯೆ:ಸಿಆಸುಇ 84 ಆಶೀಸೆ 09

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ:19.6.2009ರ ಆದೇಶದಲ್ಲಿ ಕೃಷಿ ಇಲಾಖೆಯಲ್ಲಿ ವೇತನ ಶ್ರೇಣಿ ರಹಿತ ಅಪರ ಕಾರ್ಯದರ್ಶಿ (ಆಹಾರ ಸಂಸ್ಕರಣೆ) ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಅಪರ ಕಾರ್ಯದರ್ಶಿ (ಆಹಾರ ಸಂಸ್ಕರಣೆ) ಹುದ್ದೆಗೆ ಡಾ:ಜಿ.ಕೆ. ವಸಂತಕುಮಾರ್, ಇವರನ್ನು ನೇಮಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ಕಡತದಲ್ಲಿ ಅಪರ ಕಾರ್ಯದರ್ಶಿ ಹುದ್ದೆಗೆ ಲಭ್ಯವಿರುವ ಪೂರಕ ಸಿಬ್ಬಂದಿ ಹುದ್ದೆಯನ್ನು ಸೃಜಿಸುವಂತೆ ಕೋರಲಾಗಿದೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 330 ಸಅಸೇ 2009, ಬೆಂಗಳೂರು, ದಿನಾಂಕ:29ನೇ ಆಗಸ್ಟ್, 2009**

ಕರ್ನಾಟಕ ಸರ್ಕಾರ ಸಚಿವಾಲಯದ ಕೃಷಿ ಇಲಾಖೆಯಲ್ಲಿನ ಸರ್ಕಾರದ ಅಪರ ಕಾರ್ಯದರ್ಶಿ (ಆಹಾರ ಸಂಸ್ಕರಣೆ) ಯವರ ಆಪ್ತ ಶಾಖೆಗೆ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರ.ಸಂ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಪತ್ರಾಂಕಿತ ಆಪ್ತಸಹಾಯಕ/ಶೀಘ್ರಲಿಪಿಗಾರ | 01 ಹುದ್ದೆ |
| 2 | ಕಿರಿಯ ಸಹಾಯಕ | 01 ಹುದ್ದೆ |
| 3 | ದಲಾಯತ್ | 01 ಹುದ್ದೆ |

ಈ ಮೇಲ್ಕಂಡ ಹುದ್ದೆಗಳನ್ನು ಮರು ಹೊಂದಾಣಿಕೆ ಮೂಲಕ (By Re-deployment) ಭರ್ತಿ ಮಾಡಲು ಸೂಚಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 976 ವೆಚ್ಚ 12/2009, ದಿನಾಂಕ:17.8.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2071

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ತಿದ್ದುಪಡಿ ಆದೇಶ**

**ಸಂಖ್ಯೆ:ಸಿಆಸುಇ 378 ಆಸೇಇ 09, ಬೆಂಗಳೂರು, ದಿನಾಂಕ:25ನೇ ಆಗಸ್ಟ್, 2009**

**ವಿಷಯ :** 2005ನೇ ಸಾಲಿನ ಕೆ.ಎ.ಎಸ್ (ಸಮೂಹ–ಎ) (ಕಿರಿಯ ಶ್ರೇಣಿ) ಪರೀಕ್ಷಾರ್ಥಿಗಳ ಜನ್ಮದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ–ಆದೇಶ.

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 88 ಅಸೇವ 2006, ದಿ:27.6.06.

2. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 378 ಆಸೇಇ 08, ಬೆಂಗಳೂರು ದಿ:27.6.09

ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 378 ಆಸೇಇ 08, ದಿನಾಂಕ:27.6.09 ರಲ್ಲಿನ ಕ್ರಮ ಸಂಖ್ಯೆ 16ರಲ್ಲಿನ ಶ್ರೀಮತಿ ಕೆ.ಎಂ. ಗಾಯಿತ್ರಿ ಪರಿಷತ್ ಕಾರ್ಯದರ್ಶಿ, ಮೈಸೂರು ಮಹಾನಗರ ಪಾಲಿಕೆ, ಮೈಸೂರು ರವರ ಜನ್ಮ ದಿನಾಂಕ–ಕಲಂನಲ್ಲಿನ ದಿನಾಂಕ:20.4.74 (ಇಪ್ಪತ್ತು–ನಾಲ್ಕು–ಎಪ್ಪತ್ತನಾಲ್ಕು) ಎಂಬುದರ ಬದಲಾಗಿ, ದಿನಾಂಕ:24.4.74 (ಇಪ್ಪತ್ತನಾಲ್ಕು –ನಾಲ್ಕು– ಎಪ್ಪತ್ತನಾಲ್ಕು) ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2072

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

**ಸೇರ್ಪಡೆ**

**ಸಂಖ್ಯೆ:ಸಿಆಸುಇ 119 ವಿಮಾಆ 2009, ಬೆಂಗಳೂರು, ದಿನಾಂಕ:24ನೇ ಆಗಸ್ಟ್, 2009**

ಇ–ಆಡಳಿತ ವಾರ್ಷಿಕ ಕ್ರಿಯಾ ಯೋಜನೆಗಳ ಅನುಮೋದನಾ ಸಮಿತಿ ರಚಿಸುವ ಬಗ್ಗೆ ಹೊರಡಿಸಿರುವ ದಿನಾಂಕ:1.12.2008ರ ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 37 ವಿಮಾಆ 2008ರ ಆದೇಶದಲ್ಲಿನ ಕ್ರಮ ಸಂಖ್ಯೆ 10ರ ನಂತರ "ಕ್ರಮಸಂಖ್ಯೆ 11 ಪ್ರೊ ದೇಬಬ್ರಿತ್ ದಾಸ, ಭಾರತೀಯ ಮಾಹಿತಿ ತಂತ್ರಜ್ಞಾನ ಸಂಸ್ಥೆ, ಬೆಂಗಳೂರು" ಎಂದು ಸೇರ್ಪಡೆ ಮಾಡಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2073

**ಜಿ.ಎಸ್. ಪ್ರಸನ್ನಕುಮಾರ**

ಪೀಠಾಧಿಕಾರಿ–1, ಇ–ಆಡಳಿತ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಸು)

## ಶಿಕ್ಷಣ ಸಚಿವಾಲಯ

**ವಿಷಯ :** ಕೇಂದ್ರ ಪುರಸ್ಕೃತ ಯೋಜನೆಯಾದ ಐ.ಸಿ.ಟಿ–ಫೇಸ್–3 ಯೋಜನೆಯಡಿಯಲ್ಲಿ 1763 ಸರ್ಕಾರಿ ಹಾಗೂ 2633 ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ಗಣಕ ಹಾಗೂ ಗಣಕಾಧಾರಿತ ಶಿಕ್ಷಣವನ್ನು ಜಾರಿಗೊಳಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1 ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಎಫ್ 11–25/2008, ದಿನಾಂಕ:19.2.2009.

2. ಸರ್ಕಾರದ ಆದೇಶ ಸಂಖ್ಯೆ ಇಡಿ:8:ಎಂ.ಪಿ.ಇ. 2009, ದಿನಾಂಕ:29.5.2009.

3. ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆರವರ ಪತ್ರ ಸಂಖ್ಯೆ ಇ.ಟಿ.ಡಿ. (4) ಐ.ಸಿ.ಟಿ. ಫೇಸ್–3–34/ದಿನಾಂಕ:27.8.2009.

**ಪ್ರಸ್ತಾವನೆ**

(1) ಮೇಲೆ ಓದಲಾದ (1)ರ ಕೇಂದ್ರ ಸರ್ಕಾರದ ಪತ್ರದಲ್ಲಿ ಕೇಂದ್ರ ಪುರಸ್ಕೃತ ಯೋಜನೆಯಾದ ಐ.ಸಿ.ಟಿ–ಫೇಸ್ 3 ಯೋಜನೆಯಡಿಯಲ್ಲಿ 1763 ಸರ್ಕಾರಿ ಹಾಗೂ 2633 ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ಗಣಕ ಹಾಗೂ ಗಣಕಾಧಾರಿತ ಶಿಕ್ಷಣವನ್ನು ಜಾರಿಗೊಳಿಸಲು 3150.00 ಲಕ್ಷರೂಗಳನ್ನು ಬಿಡುಗಡೆ ಮಾಡಿದ್ದು, ಅದನ್ನು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

(2) ಮೇಲೆ ಓದಲಾದ (3)ರ ಪತ್ರದಲ್ಲಿ ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆರವರು, ಕೇಂದ್ರ ಪುರಸ್ಕೃತ ಯೋಜನೆಯಾದ ಐ.ಸಿ.ಟಿ–ಫೇಸ್ 3ಯೋಜನೆಯಡಿಯಲ್ಲಿ 1763 ಸರ್ಕಾರಿ ಹಾಗೂ 2633 ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ಗಣಕ ಹಾಗೂ ಗಣಕಾಧಾರಿತ ಶಿಕ್ಷಣವನ್ನು ಜಾರಿಗೊಳಿಸಲು 2009–10ನೇ ಸಾಲಿಗೆ ರಾಜ್ಯದ ಪಾಲು 25.00ಕೋಟಿ ರೂಪಾಯಿಗಳನ್ನು ಬಿಡುಗಡೆ ಮಾಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ:238:ಎಂ.ಪಿ.ಡಿ 2009 ಬೆಂಗಳೂರು, ದಿನಾಂಕ:26ನೇ ಆಗಸ್ಟ್, 2009**

**[ಇಡಿ:106:ಸ್ವೀಮರ(ಯುನಿಕ್) 2009, ದಿನಾಂಕ:26.8.2009]**

(4) 2009–10ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–02–109–0–14–059[ಯೋಜನೆ] ಅಡಿಯಲ್ಲಿ ನಿಗದಿಯಾಗಿರುವ 25.00ಕೋಟಿರೂಪಾಯಿಗಳ [ಇಪ್ಪತ್ತೈದು ಕೋಟಿ ರೂಪಾಯಿಗಳು ಮಾತ್ರ] ಮಿತಿಯೊಳಗೆ ಕೇಂದ್ರ ಪುರಸ್ಕೃತ ಯೋಜನೆಯಾದ ಐ.ಸಿ.ಟಿ–ಫೇಸ್ 3 ಯೋಜನೆಯಡಿಯಲ್ಲಿ ರಾಜ್ಯದಲ್ಲಿರುವ 2633 ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ಗಣಕ ಹಾಗೂ ಗಣಕಾಧಾರಿತ ಶಿಕ್ಷಣವನ್ನು ನಿರ್ದೇಶಕರು, ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಬೆಂಗಳೂರು ಇವರ ಮೂಲಕ ಅನುಷ್ಠಾನಗೊಳಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿದೆ.

(5) ಈ ಯೋಜನೆಯಡಿಯಲ್ಲಿ ಗಣಕಗಳ ಖರೀದಿ ಮತ್ತು ತಾಂತ್ರಿಕ ಸಲಹೆ ಇತ್ಯಾದಿಗಳನ್ನು ಖಾಸಗಿ ಸಂಸ್ಥೆಗಳಿಂದ ಪಡೆಯುವಾಗ ಕ.ಸಾ.ಸಂ.ಪಾ.ಕಾಯ್ದೆ 1999 ನಿಯಮಗಳು 2000 ಪಾಲಿಸತಕ್ಕದ್ದು, ಹಾಗೂ ಕೇಂದ್ರ ಸರ್ಕಾರದ ಮಾರ್ಗಸೂಚಿಗಳನ್ನು ಅನುಸರಿಸಿ ಕಾರ್ಯ ಕ್ರಮವನ್ನು ಅನುಷ್ಠಾನಗೊಳಿಸತಕ್ಕದ್ದು.

(6) ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸುವ ಮೊದಲು ಇ–ಆಡಳಿತ ಇಲಾಖೆಯಡಿಯ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಾಜ್ಯಮಟ್ಟದ ಉನ್ನತಾಧಿಕಾರ ಸಮಿತಿಯ ಅನುಮೋದನೆಯನ್ನು ಪಡೆಯತಕ್ಕದ್ದು. ನಿಗದಿಯಾಗಿರುವ ಅನುದಾನದಲ್ಲಿ ಇಲಾಖೆಯ ಎಂ.ಪಿಕ್‌ನಲ್ಲಿ ನಿಗದಿಗೊಳಿಸಿರುವಂತೆ ಮೊದಲನೆಯ ಮತ್ತು ಎರಡನೆಯ ತ್ರೈಮಾಸಿಕ ಅನುದಾನವನ್ನು ಸೆಳೆಯಲು ನಿರ್ದೇಶಕರು ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ ಇವರಿಗೆ ಅನುಮೋದನೆ ನೀಡಿದೆ.

(7) ಈ ಆದೇಶವನ್ನು ಆರ್ಥಿಕ ಇಲಾಖೆ ಮತ್ತು ಯೋಜನಾ ಇಲಾಖೆಗಳು ಕ್ರಮವಾಗಿ ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 1014 ವೆಚ್ಚ 8/09/ದಿನಾಂಕ:8.7.2009 ಮತ್ತು ಅನಧಿಕೃತ ಟಿಪ್ಪಣಿ ಸಂಖ್ಯೆ ಪಿಡಿ 60 ಎಂ & ಎಫ್ 2009/ ದಿನಾಂಕ:14.7.2009ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2074

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ [ಯೋಜನೆ]

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಭದ್ರತಾ ವ್ಯವಸ್ಥೆಯನ್ನು ನೀಡುವ ಸಂಬಂಧ ವಿಶೇಷ ಕಾರ್ಯನಿರತಪಡೆ ಮತ್ತು ಜಾಗೃತದಳ ಶಾಖೆಗೆ ಹೆಚ್ಚುವರಿ ಪೊಲೀಸ್ ಸಿಬ್ಬಂದಿಗಳನ್ನು ನೇಮಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** 1 ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರ, ಪತ್ರ ಸಂಖ್ಯೆ:ಬೆಂಅಪಾ/ಆ/ಸಿವಿ/ಉಕಾ–1/1355/2009–10, ದಿನಾಂಕ:31.12.2008 ಮತ್ತು 9.6.2009.

2. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಪತ್ರ ಸಂಖ್ಯೆ:ಸಿಬ್ಬಂದಿ–6/01/2009–10, ದಿನಾಂಕ:5.5.2009.

ಮೇಲೆ ಓದಲಾದ ಉಲ್ಲೇಖ (1) ದಿನಾಂಕ:31.12.2008ರ ಪತ್ರದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರು ನಗರದಲ್ಲಿ ದಿನಾಂಕ:25.7.2008ರಂದು ಸಂಭವಿಸಿದ ಸರಣಿ ಬಾಂಬ್‌ಸ್ಫೋಟ ಹಾಗೂ ಇತ್ತೀಚಿಗೆ ಮುಂಬೈ ಬಾಂಬ್‌ಸ್ಫೋಟದ ಹಿನ್ನೆಲೆಯಲ್ಲಿ ಸರ್ಕಾರದ ವಿವಿಧ ಕಛೇರಿಗಳ ಭದ್ರತ ವ್ಯವಸ್ಥೆಯನ್ನು ಬಲಗೊಳಿಸುವುದು ಅನಿವಾರ್ಯವಾಗಿದ್ದು, ಅದರಂತೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಸಹ ಸಾರ್ವಜನಿಕ ಸಂಪರ್ಕವಿರುವ ಪ್ರಮುಖ ಕಛೇರಿಗಳಲ್ಲಿ ಒಂದಾಗಿದ್ದು, ಪ್ರಾಧಿಕಾರದ ಕಛೇರಿಯ ಭದ್ರತಾ ವ್ಯವಸ್ಥೆಗೆ ಅಮೂಲಾಗ್ರ ಪರಿವೀಕ್ಷಣೆಗೆ 32 ಹೆಚ್ಚುವರಿ ಪೊಲೀಸ್ ಸಿಬ್ಬಂದಿ (ಶಸ್ತ್ರಪಡೆ) ಅವಶ್ಯಕತೆ ಇರುವುದಾಗಿ, ಈ ಬಗ್ಗೆ ದಿನಾಂಕ:6.11.2008ರಂದು ನಡೆದ ಪ್ರಾಧಿಕಾರದ ಸಭೆಯ ವಿಷಯ ಸಂಖ್ಯೆ: 591/08ರಲ್ಲಿ ಚರ್ಚಿಸಿ, ಈ ಕೆಳಕಂಡ ಹೆಚ್ಚುವರಿ ಹುದ್ದೆಗಳನ್ನು ಸೃಜಿಸಿ ಪೊಲೀಸ್ ಇಲಾಖೆಯಿಂದ ಎರವಲು ಸೇವೆ ಮೇರೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರಕ್ಕೆ ಪಡೆಯಲು ಮಂಜೂರಾತಿ ನೀಡಬೇಕೆಂದು ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

| | | |
|---|---|---|
| 1 | ಪೊಲೀಸ್ ಇನ್ಸ್‌ಪೆಕ್ಟರ್ | 01 ಹುದ್ದೆ |
| 2 | ಪೊಲೀಸ್ ಸಬ್ ಇನ್ಸ್ ಪೆಕ್ಟರ್ | 02 ಹುದ್ದೆ |
| 3 | ಪೊಲೀಸ್ ಅಸಿಸ್ಟೆಂಟ್ ಸಬ್ ಇನ್ಸ್ ಪೆಕ್ಟರ್ | 02 ಹುದ್ದೆ |
| 4 | ಪೊಲೀಸ್ ಮುಖ್ಯ ಪೇದೆಗಳು | 02 ಹುದ್ದೆ |
| 5 | ಪೊಲೀಸ್ ಪೇದೆಗಳು (ಸಿವಿಲ್) | 08 ಹುದ್ದೆ |
| 6 | ಪೊಲೀಸ್ ಪೇದೆಗಳು (ಸಶಸ್ತ್ರ) | 17 ಹುದ್ದೆ |

ಸದರಿ ಹುದ್ದೆಗಳನ್ನು ನಿಯೋಜನೆ ಮೇರೆಗೆ ಭರ್ತಿ ಮಾಡುವ ಬಗ್ಗೆ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರು ಉಲ್ಲೇಖ (2)ರ ಪತ್ರದಲ್ಲಿ ಸದರಿ ಹುದ್ದೆಗಳಿಗೆ ನಿಯೋಜಿಸುವ ಪೂರ್ವದಲ್ಲಿ ಹುದ್ದೆಗಳನ್ನು ಪ್ರಾಧಿಕಾರದಲ್ಲಿ ಸೃಜಿಸಿದ ಆದೇಶದ ಪ್ರತಿಯನ್ನು ಕೋರಲಾಗಿರುತ್ತದೆ. ಅಂತೆಯೇ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ನಅಇ 12 ಬೆಂಆಸೇ 2009, ಬೆಂಗಳೂರು, ದಿನಾಂಕ:26ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಭದ್ರತೆಯನ್ನು ಹೆಚ್ಚಿಸುವ ಸಲುವಾಗಿ ಈ ಕೆಳಕಂಡ 32 ಹುದ್ದೆಗಳನ್ನು ಹೆಚ್ಚುವರಿಯಾಗಿ ಸೃಜಿಸಿ ಒಂದು ವರ್ಷದ ಅವಧಿಗೆ ಪೊಲೀಸ್ ಇಲಾಖೆಯಿಂದ ನಿಯೋಜನೆ ಮೇರೆಗೆ ತುಂಬಲು ಮಂಜೂರಾತಿ ನೀಡಲಾಗಿದೆ.

| | | |
|---|---|---|
| 1 | ಪೊಲೀಸ್ ಇನ್ಸ್‌ಪೆಕ್ಟರ್ | 01 ಹುದ್ದೆ |
| 2 | ಪೊಲೀಸ್ ಸಬ್ ಇನ್ಸ್ ಪೆಕ್ಟರ್ | 02 ಹುದ್ದೆ |
| 3 | ಪೊಲೀಸ್ ಅಸಿಸ್ಟೆಂಟ್ ಸಬ್ ಇನ್ಸ್ ಪೆಕ್ಟರ್ | 02 ಹುದ್ದೆ |
| 4 | ಪೊಲೀಸ್ ಮುಖ್ಯ ಪೇದೆಗಳು | 02 ಹುದ್ದೆ |
| 5 | ಪೊಲೀಸ್ ಪೇದೆಗಳು (ಸಿವಿಲ್) | 08 ಹುದ್ದೆ |
| 6 | ಪೊಲೀಸ್ ಪೇದೆಗಳು (ಸಶಸ್ತ್ರ) | 17 ಹುದ್ದೆ |
| | ಒಟ್ಟು | 32 ಹುದ್ದೆಗಳು |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಎಫ್‌ಡಿ 357 ವೆಚ್ಚ–9/09, ದಿನಾಂಕ:24.6.2009ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2075

**ಎಂ.ಎಸ್. ಪ್ರೇಮಚಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮೈಸೂರು ವಿಮಾನ ನಿಲ್ದಾಣದ 2ನೇ ಹಂತದ ಅಭಿವೃದ್ಧಿ ಕುರಿತಂತೆ ಸಾಧ್ಯಾತಾ ವರದಿಯನ್ನು ತಯಾರಿಸಲು ಐಡೆಕ್‌ಗೆ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1 ಮುಖ್ಯ ಕಾರ್ಯಾಚರಣೆ ಅಧಿಕಾರಿ, ಐಡೆಕ್ ರವರ ದಿನಾಂಕ:22.7.2009ರ ಪತ್ರ

2. ಸರ್ಕಾರದ ಸಮ ಸಂಖ್ಯೆಯ ಪತ್ರ ದಿನಾಂಕ:1.8.2009

3. ದಿನಾಂಕ:5.8.2009ರ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಐಡೆಕ್‌ರವರ ಪತ್ರ

**ಪ್ರಸ್ತಾವನೆ:**

ಮೈಸೂರು ವಿಮಾನ ನಿಲ್ದಾಣದ 2ನೇ ಹಂತದ ಅಭಿವೃದ್ಧಿಗೆ ಸಂಬಂಧಿಸಿದಂತೆ ಸಾಧ್ಯಾತಾ ವರದಿಯನ್ನು ಸಂಚಾರ, ಮಾಹಿತಿ, ವೆಚ್ಚ, ಆದಾಯ, ಆರ್ಥಿಕ ವಿಶ್ಲೇಷಣೆಗಳನ್ನೊಳಗೊಂಡಂತೆ ತಯಾರಿಸಲು ಅಂದಾಜು ರೂ. 9.98 ಲಕ್ಷಗಳನ್ನು ಬಿಡುಗಡೆ ಮಾಡಲು ಓದಲಾದ 1ರ ಪತ್ರದಲ್ಲಿ ಕೋರಲಾಗಿದೆ.

ಮೇಲೆ ಓದಲಾದ (2)ರಲ್ಲಿನ ಸರ್ಕಾರದ ಪತ್ರದಲ್ಲಿ ಸದರಿ ಸಾಧ್ಯಾತಾ ವಿಶ್ಲೇಷನಾ ವರದಿಯ ವೆಚ್ಚವನ್ನು ಆದೇಶ ಸಂ.ಮೂಅಇ 57 ಮೂಇವಿ 07ರಲ್ಲಿ ಈಗಾಗಲೇ ಐಡೆಕ್‌ಗೆ ಬಿಡುಗಡೆ ಮಾಡಲಾದ ರೂ. 200.00 ಲಕ್ಷಗಳಲ್ಲಿ ಭರಿಸಲು ಸೂಚಿಸಲಾಗಿತ್ತು.

ಮೇಲೆ ಓದಲಾದ (3)ರ ದಿನಾಂಕ:5.8.09ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಐಡೆಕ್‌ರವರು, ಈ ಮೊತ್ತವನ್ನು ಸದರಿ ಆದೇಶದಲ್ಲಿ ಬಿಡುಗಡೆ ಮಾಡಿರುವ ಮೊತ್ತದಿಂದ ಭರಿಸಲು ಸಾಧ್ಯವಿಲ್ಲದಿರುವುದಕ್ಕೆ ವಿವರವಾದ ಕಾರಣಗಳನ್ನು ನೀಡುತ್ತಾ ಸಂಚಾರ ಅಧ್ಯಯನ ಹಾಗೂ ಪ್ರಾಥಮಿಕ ವೆಚ್ಚ ಮತ್ತು ಯೋಜನೆಯ ಕಾರ್ಯಸಾಧ್ಯಾತಾ ವಿಶ್ಲೇಷಣೆಯನ್ನು ಕೈಗೊಳ್ಳಲು ತಲಾ ರೂ. 4.99ಲಕ್ಷಗಳಂತೆ ಒಟ್ಟು 9.98ಲಕ್ಷಗಳನ್ನು ಬಿಡುಗಡೆ ಮಾಡಲು ಪುನಃ ಕೋರಿರುತ್ತಾರೆ.

ಐಡೆಕ್ ನೀಡಿರುವ ಸಮರ್ಥನೆಗಳ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 179 ರಾಅವಿ 2009, ಬೆಂಗಳೂರು, ದಿನಾಂಕ:29ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ವಿಮಾನ ನಿಲ್ದಾಣದ 2ನೇ ಹಂತದ ಅಭಿವೃದ್ಧಿಗೆ ಸಂಬಂಧಿಸಿದಂತೆ ಸಂಚಾರ ಅಧ್ಯಯನ ಹಾಗೂ ಪ್ರಾಥಮಿಕ ವೆಚ್ಚ ಮತ್ತು ಯೋಜನೆಯ ಕಾರ್ಯಸಾಧ್ಯಾತಾ ವಿಶ್ಲೇಷಣೆಯನ್ನು ಕೈಗೊಳ್ಳಲು ಒಟ್ಟು 9.98 ಲಕ್ಷಗಳನ್ನು ಐಡೆಕ್‌ಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2. ಈ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 3451–00–090–106–059 ಇತರೆ ಖರ್ಚು ಇದರಲ್ಲಿ ಒದಗಿಸಿರುವ ಮೊತ್ತದಿಂದ ಭರಿಸತಕ್ಕದ್ದು.

3. ಈ ಮೊತ್ತವನ್ನು ಚೀಫ್ ಫೈನಾನ್ಷಿಯಲ್ ಆಫೀಸರ್ ಮತ್ತು ಕಂಪನಿ ಕಾರ್ಯದರ್ಶಿ, ಐಡೆಕ್ ಇವರು ಪೇಯೀಸ್ ರಸೀದಿಯ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯಲು ಅನುಮತಿಸಿದೆ.

4. ಈ ಆದೇಶವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂ. ಎಫ್‌ಡಿ 01 ಟಿಎಫ್ ಪಿ 08 ದಿನಾಂಕ:16.5.2008ರಲ್ಲಿ ನೀಡಿರುವ ಆರ್ಥಿಕ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2076

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಬೆನಕನ ಹಳ್ಳಿ ಸೈಟ್–2 ಹತ್ತಿರ ದೊಡ್ಡಹಳ್ಳಕ್ಕೆ ಅಡ್ಡಲಾಗಿ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ ಭಾಗ–1 (2) 2009 ದಿನಾಂಕ 16.02.2009.

2. ದಿನಾಂಕ: 17.07.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ /ಸನೀ(ಉ)ವ /ಬಿಜೆಪಿ /ಪಿಬಿ–9 /ಬೆನಕನ ಹಳ್ಳಿ ಸೈಟ್–2 ಬಿಸಿಬಿ/2009–10 /4232,

3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರುರವರ ದಿನಾಂಕ 16/07/09ರ ಪತ್ರ ಸಂಖ್ಯೆ:ಮುಸದ/ಆಪ್ತಶಾಖೆ/ಟೆಂಡರ್/08–09/ 1986.

<u>ಪ್ರಸ್ತಾವನೆ:</u>

ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಬೆನಕನ ಹಳ್ಳಿ ಸೈಟ್–2 ಹತ್ತಿರ ದೊಡ್ಡಹಳ್ಳಕ್ಕೆ ಅಡ್ಡಲಾಗಿ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ 185.00ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 16/02/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | 31.01.2009 |
| 2 | ಸಂಯುಕ್ತ ಕರ್ನಾಟಕ ದಿನಪತ್ರಿಕೆ | 04.02.2009 |
| 3 | ವಿಜಯ ಕರ್ನಾಟಕ ದಿನಪತ್ರಿಕೆ | 13.02.2009 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 4 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 15/06/09ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಅವರ ಅರ್ಥಿಕ ಬಿಡ್‌ಗಳನ್ನು ದಿನಾಂಕ 26/06/09ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ 1,70,71,555/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ 1,66,49,802/– |
| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
| 1 | ಜಿ. ಮಸ್ತಾನಯ್ಯ | 2,01,42,654/– | 17.99 ಹೆಚ್ಚು | 20.98 ಹೆಚ್ಚು |
| 2 | ಎ.ಎಸ್. ಪಾಟೀಲ | 2,03,76,728/– | 19.36 ಹೆಚ್ಚು | 22.38 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 2,01,42,654–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 20.98ರಷ್ಟು ಹೆಚ್ಚಾಗಿದೆ. ಈ ಕಾಮಗಾರಿಯನ್ನು ತಕ್ಷಣವೇ ಕೈಗೊಳ್ಳುವ ಅಗತ್ಯವಿದ್ದುದರಿಂದ, ದಿನಾಂಕ 15/07/09ರಂದು ನಡೆದ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯಲ್ಲಿ ಸಮಿತಿಯ ಅಧ್ಯಕ್ಷರ ಅನುಮತಿಯೊಂದಿಗೆ ಟೆಂಡರ್‌ನ್ನು ಪರಿಶೀಲಿಸಲಾಗಿದ್ದು, ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,66,49,802–00ಗಳ ಮೇಲೆ ಶೇಕಡ 14.90ರಷ್ಟು ಹೆಚ್ಚಿನ ದರಗಳಿಗೆ ಅಂದರೆ

ರೂ.1,91,30,622–00ಗಳಿಗೆ ಕಾಮಗಾರಿಯನ್ನು ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ವಹಿಸಲು ಸಮಿತಿಯು ತೀರ್ಮಾನಿಸಿರುವುದಾಗಿ ತಿಳಿಸಿ ಟೆಂಡರ್‌ನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ದಿನಾಂಕ 15/07/09ರ ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ನಡವಳಿಗಳನ್ನು ಮೇಲೆ 3ರಲ್ಲಿ ಓದಲಾದ ಪತ್ರದೊಂದಿಗೆ ಸ್ವೀಕರಿಸಲಾಗಿದ್ದು, ನಡವಳಿಗಳನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 52 ಅಪಿಬಂ 2009, ಬೆಂಗಳೂರು, ದಿನಾಂಕ 14ನೇ ಆಗಸ್ಟ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ, ಇಂಡಿ ತಾಲ್ಲೂಕು, ಬೆನಕನ ಹಳ್ಳಿ ಸೈಟ್–2 ಹತ್ತಿರ ದೊಡ್ಡಹಳ್ಳಕ್ಕೆ ಅಡ್ಡಲಾಗಿ ಹತ್ತಿರ ಬ್ಯಾರೇಜ್ ಸಹಿತ ಸೇತುವೆ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,66,49,802–00ಗಳ ಮೇಲೆ ಶೇಕಡ 14.90ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,91,30,622–00ಗಳಿಗೆ (ಒಂದು ಕೋಟಿ ತೊಂಬತ್ತೊಂದು ಲಕ್ಷದ ಮುವತ್ತು ಸಾವಿರದ ಅರವತ್ತೆರಡು ರೂ.ಗಳು ಮಾತ್ರ) ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2041

**ಕೆ.ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ :** ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಮಾಚಕನೂರು ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಹೆಬ್ಬಾಳ ಗ್ರಾಮಗಳ ಹತ್ತಿರ ಸೇತುವೆ ಸಹಿತ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ಸನೀಇ 118 ಅಪಿಬಂ 2008 ದಿನಾಂಕ 17.01.2009.
2. ದಿನಾಂಕ: 17.07.2009ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ /ಸನೀ(ಉ)ವಲಯ /ಬಿಜೆಪಿ /ಎಇ–6 /2009–10 /4231
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದಕ್ಷಿಣ)ವಲಯ, ಬೆಂಗಳೂರು ರವರ ದಿನಾಂಕ16.07.2009ರ ಪತ್ರ ಸಂಖ್ಯೆ: ಮುಸದ/ ಆಪ್ತಶಾಖೆ/ ಟೆಂಡರ್/ 08–09/1726.

**ಪ್ರಸ್ತಾವನೆ:**

ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕು, ಮಾಚಕನೂರು ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಹೆಬ್ಬಾಳ ಗ್ರಾಮಗಳ ಹತ್ತಿರ ಸೇತುವೆ ಸಹಿತ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 609.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 17.01.2009ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | **ರಾಜ್ಯ ಟೆಂಡರ್ ಬುಲೆಟಿನ್** | **ದಿ:31/01/09** |
| 2 | **ಸಂಯುಕ್ತ ಕರ್ನಾಟಕ ದಿನಪತ್ರಿಕೆ** | **ದಿ:04/02/09** |
| 3 | **ವಿಜಯ ಕರ್ನಾಟಕ ದಿನಪತ್ರಿಕೆ** | **ದಿ:13/02/09** |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಖಾಲಿ ಟೆಂಡರ್ ಫಾರಂ ಪಡೆದ 7 ಜನ ಗುತ್ತಿಗೆದಾರರ ಪೈಕಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 15/06/09ರಂದು ತೆರೆಯಲಾಗಿ ಇಬ್ಬರು ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಅವರ ಅರ್ಥಿಕ ಬಿಡ್‌ಗಳನ್ನು

